# " ಹರಿಹರ ಮತ್ತು ಪೆರಿಯಪುರಾಣ "

## -ತೌಲನಿಕ ಅಧ್ಯಯನ

(ಕನ್ನಡ ಎಂ.ಫಿಲ್. ಪದವಿಗಾಗಿ, ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ನಿಬಂಧ)


ಮಾರ್ಗದರ್ಶಕರು :

**ಪ್ರೊ. ಹೆಚ್. ಬಿಳಿಗೌಡ**

ನಿವೃತ್ತ ಪ್ರಾಧ್ಯಾಪಕರು,
ಭಾರತಿ ಕಾಲೇಜು, ಭಾರತಿನಗರ,
ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ.

ಸಂಶೋಧಕರು :

**ಎಂ.ಎಸ್. ಮಹದೇವಸ್ವಾಮಿ**

ಎಂ.ಫಿಲ್. ಅಭ್ಯರ್ಥಿ
ಎಂ. ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
ಕರ್ನಾಟಕ ಸಂಘ (ರಿ), ಮಂಡ್ಯ





ಕರ್ನಾಟಕ ಸಂಘ (ರಿ). ಮಂಡ್ಯ

ಎಂ. ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ

(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)

2007-08

# " ಹರಿಹರ ಮತ್ತು ಪೆರಿಯಪುರಾಣ "
# -ತೌಲನಿಕ ಅಧ್ಯಯನ

(ಕನ್ನಡ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ನಿಬಂಧ)


ಮಾರ್ಗದರ್ಶಕರು :

**ಪ್ರೊ. ಹೆಚ್. ಬಿಳೀಗೌಡ**

ನಿವೃತ್ತ ಪ್ರಾಧ್ಯಾಪಕರು
ಭಾರತಿ ಕಾಲೇಜು, ಭಾರತಿನಗರ,
ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ.

ಸಂಶೋಧಕರು :

**ಎಂ.ಎಸ್. ಮಹದೇವಸ್ವಾಮಿ**

ಎಂ.ಫಿಲ್. ಅಭ್ಯರ್ಥಿ
ಎಂ. ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
ಕರ್ನಾಟಕ ಸಂಘ (ರಿ), ಮಂಡ್ಯ.







**ಕರ್ನಾಟಕ ಸಂಘ (ರಿ), ಮಂಡ್ಯ.**

**ಎಂ. ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ**

(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)

**2007-08**

## ಮಾರ್ಗದರ್ಶಕರ ದೃಢೀಕರಣ ಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾನಿಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ 2007-08ನೇ ಸಾಲಿಗೆ ಕನ್ನಡ ಎಂ.ಫಿಲ್. ಅಭ್ಯರ್ಥಿಯಾಗಿ ಇವರು ಪ್ರವೇಶ ಪಡೆದಿರುತ್ತಾರೆ. ಎಂ.ಫಿಲ್. ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು "ಹರಿಹರ ಮತ್ತು ಪೆರಿಯಪುರಾಣ - ತೌಲನಿಕ ಅಧ್ಯಯನ" ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ನನ್ನ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತಾರೆ.

ಈ ನಿಬಂಧವನ್ನಾಗಲಿ, ನಿಬಂಧದ ಅಧ್ಯಾಯಗಳನ್ನಾಗಲಿ ಬೇರೆ ಯಾವ ಗ್ರಂಥಗಳು ಹಾಗೂ ನಿಯತಕಾಲಿಕೆಗಳಲ್ಲಿ ಪ್ರಕಟಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತಿದ್ದೇನೆ. ಕನ್ನಡ ವಿಶ್ವವಿದ್ಯಾನಿಲಯವು ನೀಡುವ ಎಂ.ಫಿಲ್. ಪದವಿಗಾಗಿ ಈ ನಿಬಂಧವನ್ನು ಒಪ್ಪಿಸಿರುತ್ತಾರೆ.

ಪ್ರೊ. ಹೆಚ್. ಬಿಳಿಗೌಡ
ನಿವೃತ್ತ ಪ್ರಾಧ್ಯಾಪಕರು
ಭಾರತೀ ಕಾಲೇಜು, ಭಾರತೀನಗರ
ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ.

ದಿನಾಂಕ : 30-9-2008
ಸ್ಥಳ : ಮಂಡ್ಯ

# ಅಭ್ಯರ್ಥಿಯ ದೃಢೀಕರಣ ಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾನಿಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ 2007-08ನೇ ಸಾಲಿಗೆ ಕನ್ನಡ ಎಂ.ಫಿಲ್. ಅಭ್ಯರ್ಥಿಯಾಗಿ ನಾನು ಪ್ರವೇಶ ಪಡೆದಿರುತ್ತೇನೆ. ನನ್ನ ಎಂ.ಫಿಲ್. ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು "ಹರಿಹರ ಮತ್ತು ಪೆರಿಯಪುರಾಣ - ತೌಲನಿಕ ಅಧ್ಯಯನ" ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ಪ್ರೊ. ಹೆಚ್. ಬಿಳೀಗೌಡ ಅವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಗಲಿ, ನಿಬಂಧದ ಅಧ್ಯಾಯಗಳನ್ನಾಗಲಿ ಬೇರೆ ಯಾವ ಗ್ರಂಥಗಳು ಹಾಗೂ ನಿಯತಕಾಲಿಕೆಗಳಲ್ಲಿ ಪ್ರಕಟಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತಿದ್ದೇನೆ. ಕನ್ನಡ ವಿಶ್ವವಿದ್ಯಾನಿಲಯವು ನೀಡುವ ಎಂ.ಫಿಲ್. ಪದವಿಗಾಗಿ ಈ ನಿಬಂಧವನ್ನು ಒಪ್ಪಿಸುತ್ತಿದ್ದೇನೆ.

ಎಂ.ಎಸ್. ಮಹದೇವಸ್ವಾಮಿ
ಎಂ.ಫಿಲ್. ಅಭ್ಯರ್ಥಿ
ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
ಕರ್ನಾಟಕ ಸಂಘ(ರಿ), ಮಂಡ್ಯ.

ದಿನಾಂಕ : 30-9-2008
ಸ್ಥಳ : ಮಂಡ್ಯ

# ಪರಿವಿಡಿ

# ಅಧ್ಯಾಯ - ೧

## ಅಧ್ಯಯನದ ಉದ್ದೇಶ, ವ್ಯಾಪ್ತಿ

ತೌಲನಿಕ ಅಧ್ಯಯನವು ಒಂದು ಭಾಷೆಯ ಸಾಹಿತ್ಯವನ್ನು ಇನ್ನೊಂದು ಭಾಷೆಯ ಸಾಹಿತ್ಯದೊಡನೆ ಹೋಲಿಸಿ ನೋಡುವುದಾಗಿದೆ. ಒಬ್ಬ ಕವಿಯೊಡನೆ ಮತ್ತೊಬ್ಬ ಕವಿಯನ್ನು ತುಲನೆಮಾಡಿ ನೋಡುವುದೂ ಇದೇ ವಿಧದ ಅಧ್ಯಯನವೇ. ತೌಲನಿಕ ಅಧ್ಯಯನದಿಂದ ಕವಿ ಅಥವಾ ಕೃತಿಗಳ ವೈಶಿಷ್ಟ್ಯ, ಅವುಗಳ ನಡುವಿನ ಸಂಬಂಧ ಹಾಗೂ ಹಿರಿಮೆ ಕಿರಿಮೆಗಳನ್ನೂ ತಿಳಿಯಲು ಸಹಾಯಕ ಾಗುತ್ತದೆ. ಒಂದು ಭಾಷೆಯ ಸಾಹಿತ್ಯಕ್ಕೂ ಮತ್ತೊಂದು ಭಾಷೆಯ ಸಾಹಿತ್ಯಕ್ಕೂ ಇರುವ ಭಾವ ಸಂಬಂಧವನ್ನು ಗ್ರಹಿಸಲು ತುಲನಾತ್ಮಕ ಅಧ್ಯಯನ ನೆರವಾಗುತ್ತದೆ. ನಮ್ಮ ನೆರೆ-ಹೊರೆಯ ರಾಜ್ಯಗಳ ಭಾಷೆ-ಸಾಹಿತ್ಯಗಳ ಅಧ್ಯಯನ ಹಾಗೂ ಕನ್ನಡದೊಂದಿಗೆ ಅವುಗಳ ತುಲನಾತ್ಮಕ ಅಧ್ಯಯನ ಭಾರತೀಯರ ಭಾವೈಕ್ಯತೆಗೂ ಅವಕಾಶ ಮಾಡಿಕೊಡುತ್ತದೆ.

ಧಾರ್ಮಿಕ, ರಾಜಕೀಯ, ಭಾಷಿಕ, ನೆಲ, ಜಲ ಸಂಗತಿಗಳ ಕಾರಣಕ್ಕಾಗಿ ನಮ್ಮ ನಮ್ಮ ನಡುವೆ ದ್ವೇಷದ ವಾತಾವರಣ ಮೂಡಿದೆ. ಎರಡು ಭಾಷಾ ಸಾಹಿತ್ಯಗಳ ತೌಲನಿಕ ಅಧ್ಯಯನದಿಂದ ಸುಮಧುರ ಸಂಬಂಧ ಉಂಟಾಗುವುದರ ಜೊತೆಗೆ ಎರಡು ಭಾಷಾ ಸಾಹಿತ್ಯಗಳ ನಡುವಿನ ಸಮಾನ ಪ್ರೇರಣೆ, ಪ್ರಭಾವ,ಪರಸ್ಪರ ಕೊಡು-ಕೊಳ್ಳುವಿಕೆ, ಈ ತರಹದ ಅಧ್ಯಯನದಿಂದ ತಿಳಿದು ಬರುತ್ತದೆ.

ಅಧ್ಯಯನದ ಉದ್ದೇಶ ವಿಶ್ವವಿದ್ಯಾನಿಲಯದಿಂದ ಪದವಿ ಪಡೆಯುವ ಕಾರಣಕ್ಕಾಗಿಯಷ್ಟೇ ಆಗಬಾರದು. ಎರಡು ಭಾಷಾ ಸಾಹಿತ್ಯಗಳ ಅಧ್ಯಯನ ಎರಡೂ ಪ್ರದೇಶಗಳ ಜನರ ನಡುವಿನ ಬಾಂಧವ್ಯಕ್ಕೆ ಸೇತುವಾಗುವ ಕಾರಣದಿಂದ ತೌಲನಿಕ ಅಧ್ಯಯನಗಳು ಅಗತ್ಯ ಇಂದು ಎಂದಿಗಿಂತ ಹೆಚ್ಚಿದೆ. ಏಕೆಂದರೆ ಒಂದು ದೇಶದ ಒಳಮನಸ್ಸು ವಿಶೇಷವಾಗಿ ಅಭಿವ್ಯಕ್ತವಾಗುವುದು ಅಲ್ಲಿನ ಸಾಹಿತ್ಯದಲ್ಲಿಯೇ ಎಂದರೆ ತಪ್ಪಲ್ಲ. ಈ ಮನಸ್ಸನ್ನು ಅದರ ಪರಿಸರ, ಜೀವನಕ್ರಮ, ಸಾಮಾಜಿಕ ವ್ಯವಸ್ಥೆ, ಧರ್ಮಶ್ರದ್ಧೆ ಆಚಾರ-ವಿಚಾರ ಇತ್ಯಾದಿಗಳು ರೂಪಿಸುತ್ತದೆ. ಸಾಹಿತ್ಯವನ್ನು ಅದು ನೀಡುವ ರಸಾನುಭವಕ್ಕಾಗಿ ಮಾತ್ರವೇ ಅಧ್ಯಯನ ಮಾಡದೆ ಒಳಮನಸ್ಸಿನ ವಿಕಾಸವನ್ನು ಗುರುತಿಸುವುದಕ್ಕೆ ಸಾಹಿತ್ಯದಿಂದ ಸಾಧ್ಯವಾಗುತ್ತದೆ ಎಂಬ ಕಾರಣದಿಂದಲೂ ಬೇರೆ ಬೇರೆ ಭಾಷಿಕ ಸಾಹಿತ್ಯಗಳ ಓದು ಅಗತ್ಯವಿದೆ. ಇದು ನಮ್ಮ

ನಮ್ಮ ನಡುವೆ ನಾವೇ ನಿರ್ಮಾಣಮಾಡಿಕೊಂಡಿರುವ ಸಂಕುಚಿತಭಾವನೆಗಳ ಗೋಡೆಗಳನ್ನು ಕೆಡವಲು ಸಹಾಯಕವಾಗುತ್ತದೆ.

ರಾಜಕೀಯ, ಭಾಷಿಕ ಸಂಗತಿಗಳ ಕಾರಣಕ್ಕಾಗಿ ಒಂದು ದ್ವೇಷ ನಮ್ಮ ನಮ್ಮಲ್ಲಿ ನೆಲೆಸಿ ನಮ್ಮನ್ನ ದೂರ ಸರಿಸಿದೆ. ನಮ್ಮ ಸುತ್ತಮುತ್ತ ಇರುವ ಜನಾಂಗ, ಸಂಸ್ಕೃತಿ, ಭಾಷೆ ಇವುಗಳನ್ನು ಅರ್ಥಮಾಡಿಕೊಂಡು ಬಾಳಬೇಕು. ನಮ್ಮದೇ ಶ್ರೇಷ್ಠ ಎಂಬ ಕಾರಣದಿಂದ ನಮ್ಮಲ್ಲಿ ಪ್ರಕಟವಾದುದ್ದನ್ನು ಅವರೂ, ಅವರಲ್ಲಿ ಪ್ರಕಟವಾದದ್ದನ್ನು ನಾವು ಓದದೇ ಸಮೀಪದಲ್ಲಿದ್ದೂ ಅಂತರವನ್ನು ಸೃಷ್ಠಿ ಮಾಡಿಕೊಂಡು ಅನೇಕ ಬಿಕ್ಕಟ್ಟುಗಳಿಗೆ ಕಾರಣರಾಗಿದ್ದೇವೆ. ಒಳ್ಳೆಯದು ಯಾವ ಕಡೆಯಿಂದ ಬಂದರೂ ಅದನ್ನು ಸ್ವೀಕರಿಸುವ ಮನಸ್ಸು ನಮ್ಮದಾಗಬೇಕು. ನಮ್ಮ ನಮ್ಮ ಸಾಹಿತ್ಯದ ಬಗ್ಗೆ ತಿಳಿದುಕೊಳ್ಳುವ ಆತುರದ ಜೊತೆಗೆ ಬೇರೆ ಕಡೆಗೂ ತಿರುಗಿ ನೋಡಬೇಕು. ವಿಶ್ವ ಸಾಹಿತ್ಯವನ್ನು ತಿಳಿದುಕೊಳ್ಳುವುದರ ಜೊತೆಗೆ ನಮ್ಮನ್ನ ನಾವು ತೆರೆದುಕೊಳ್ಳಬೇಕು. ನಮ್ಮ ದ್ರಾವಿಡ ಸಂಪ್ರದಾಯದಲ್ಲಿ ಏನಿದೆ? ಅವುಗಳ ಸಂಬಂಧ ಏನು? ಎನ್ನುವುದು ಬೇಕು. ದ್ವೇಷ ಮನೋವೃತ್ತಿ ಬೇಡ. ತಮಿಳಿನ ಪ್ರಭಾವ ಕನ್ನಡದ ಮೇಲೆ ಆಗಿದ್ದರೆ ಅದರ ಸ್ವರೂಪ ಏನು? ಕನ್ನಡದ ಪದಗಳು ಅಲ್ಲಿ ದೊರಕಿದರೆ ಅದಕ್ಕೆ ಕಾರಣ ಏನು? ಎನ್ನುವುದರ ಬಗ್ಗೆ ಗುರುತಿಸಬೇಕು. ಆ ಕಾರಣಕ್ಕಾಗಿ ತೌಲನಿಕ ಸಾಹಿತ್ಯಾಧ್ಯಯನದ ಅಗತ್ಯ ಇದೆ.

ಕನ್ನಡದ ಮಹಾಕವಿಗಳ ಸಾಲಿನಲ್ಲಿ ನಿಲ್ಲಬಲ್ಲ ಹರಿಹರ ಕವಿ ರಚಿಸಿರುವ 'ಪುರಾತನ ರಗಳೆ'ಗಳು ಹಾಗೂ ತಮಿಳಿನ ಶೇಕ್ಕಿಳಾರ್ ಕವಿಯ 'ಪೆರಿಯ ಪುರಾಣ'ದ ತೌಲನಿಕ ಅಧ್ಯಯನವೇ ಪ್ರಸ್ತುತ ನಿಬಂಧದ ವಿಷಯ.

ಪೆರಿಯಪುರಾಣ ಹಾಗೂ ಹರಿಹರನ ಪುರಾತನರ ರಗಳೆಗಳ ಬಗೆಗೆ ವ್ಯಾಪಕವಾದ ತೌಲನಿಕ ಅಧ್ಯಯನ ಕನ್ನಡದಲ್ಲಿ ನಡೆದಿಲ್ಲ. ಈ ದಿಶೆಯಲ್ಲಿ ಸಾಗಲು 'ಪೆರಿಯಪುರಾಣ' ಪೂರ್ಣರೂಪದಲ್ಲಿ ಕನ್ನಡಕ್ಕೆ ಅನುವಾದಗೊಳ್ಳದಿರುವುದು ಒಂದು ದೊಡ್ಡ ಕೊರತೆ. " ಎಲ್.ಗುಂಡಪ್ಪನವರು 'ಪೆರಿಯಪುರಾಣ'ದ ಮೊದಲ ಸಂಪುಟ ವನ್ನು ಅನುವಾದಿಸಿರುವರು".[೧] ಇದರಲ್ಲಿ ಅಮರನೀತಿ ನಾಯನಾರರ ಪುರಾಣದವರೆಗೆ ಅನುವಾದ ಪ್ರಕಟವಾಗಿದೆ. "ಎ. ಶಂಕರ ಕೆದಿಲಾಯ ಅವರು 'ಪೆರಿಯಪುರಾಣ'ದ ಎರಡು ಭಾಗಗಳನ್ನು ಅನುವಾದಿಸಿರುವರು".[೨] ಮೊದಲ ಭಾಗದಲ್ಲಿ ಚಂಡೇಶಪಿಳ್ಳೆ ನಾಯನಾರರ ಪುರಾಣದವರೆವಿಗೂ ಎರಡನೆಯ ಭಾಗದಲ್ಲಿ ತಿರುಜ್ಞಾನಸಂಬಂಧ ನಾಯನಾರರ ಪುರಾಣದ ಪೂರ್ವಾರ್ಧದವರೆವಿಗೂ ಅನುವಾದ

---

೧. ಪ್ರಕಟಣಾ ಮತ್ತು ಪ್ರಚಾರೋಪನ್ಯಾಸ ವಿಭಾಗ: ಬೆಂಗಳೂರುವಿಶ್ವವಿದ್ಯಾನಿಲಯ, ಬೆಂಗಳೂರು. ೧೯೭೯
೨. ಮದ್ರಾಸು ವಿಶ್ವವಿದ್ಯಾನಿಲಯ, ಮದ್ರಾಸು. ೧೯೭೪, ೧೯೮೦

ನಡೆಸಲು ಸಾಧ್ಯವಿಲ್ಲ. ಹರಿಹರ ರಚಿಸಿರುವ ಪುರಾತನರ ರಗಳೆಗಳ ಬಗ್ಗೆಯೂ ಸಾಕಷ್ಟು ಚರ್ಚೆಗಳು ವಿದ್ವಾಂಸವಲಯದಲ್ಲಿ ನಡೆದಿದೆ. ಪುರಾತನರ ಬಗ್ಗೆ ಈತ ಎಷ್ಟು ರಗಳೆಗಳನ್ನು ರಚಿಸಿದ್ದಾನೆ. ಯಾವುವು? ಎಂಬುದರ ಬಗ್ಗೆ ವಿವರಗಳನ್ನು ಈ ನಿಬಂಧದಲ್ಲಿ ನೀಡಲಾಗಿದೆ. ಪುರಾತನರ ರಗಳೆಗಳಿಗೆ ಕಥಾವಸ್ತುವನ್ನು ಹರಿಹರ ಪೆರಿಯಪುರಾಣದಿಂದ ಸ್ವೀಕರಿಸಿದ್ದಾನೊ ಅಥವಾ ಬೇರೆ ಮೂಲಗಳಿಂದ ಸಂಗ್ರಹಿಸಿದ್ದಾನೊ ಎಂಬ ಬಗ್ಗೆ, ಮತ್ತು ಪ್ರೇರಣ-ಪ್ರಭಾವಗಳು, ಎರಡೂ ಕಥಾವಸ್ತುಗಳಿಗಿರುವ ಸಾಮ್ಯ-ವೈಷಮ್ಯಗಳ ಬಗ್ಗೆಯೂ ಅಧ್ಯಯನ ನಡೆಸಲಾಗುವುದು.

ಪೆರಿಯಪುರಾಣ ಪೂರ್ಣವಾಗಿ ಅನುವಾದಗೊಳ್ಳದಿರುವ ಕಾರಣದ ಜೊತೆಗೆ ಮತ್ತು ಈ ಪ್ರಬಂಧದ ಮಿತಿಯ ಹಿನ್ನೆಲೆಯಲ್ಲಿ ಹರಿಹರಕೃತ ಪುರಾತನರ ಎಲ್ಲಾ ರಗಳೆಗಳನ್ನು ತೌಲನಿಕವಾಗಿ ಅಧ್ಯಯನ ಮಾಡಲಾಗುತ್ತಿಲ್ಲ. ಪ್ರಾತಿನಿಧಿಕವಾಗಿ ಕೆಲವು ರಗಳೆಗಳನ್ನು ಮಾತ್ರ ತೌಲನಿಕ ವ್ಯಾಪ್ತಿಗೆ ಒಳಪಡಿಸಲಾಗುವುದು. ಒಟ್ಟಾರೆ ಈ ಎಲ್ಲಾ ರಗಳೆಗಳ ವಿವೇಚನೆಗೆ ತೊಡಗಿದ ಸಂದರ್ಭದಲ್ಲಿ ಸಾಂಸ್ಕೃತಿಕ ಹಾಗೂ ಸ್ತ್ರೀವಾದಿ ನೆಲೆಯಲ್ಲಿಯೂ ಕೆಲವು ರಗಳೆಗಳನ್ನು ನೋಡಲಾಗಿದೆ.

ಒಟ್ಟಾರೆಯಾಗಿ ಹರಿಹರ ಪುರಾತನರ ರಗಳೆಗಳನ್ನು ಹಾಗೂ ಶೇಕ್ಕಿಳಾರನ ಪೆರಿಯಪುರಾಣವನ್ನು ತುಲನಾತ್ಮಕವಾಗಿ ನೋಡುವುದೇ ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

ಅಧ್ಯಾಯ - ೧

# ಹರಿಹರ ಮತ್ತು ಶೇಕ್ಕಿಳಾರ್‌ಕವಿಗಳ ಇತಿವೃತ್ತ

## ಅ) ಹರಿಹರನ ಇತಿವೃತ್ತ :

ಕನ್ನಡ ಸಾರಸ್ವತ ಪ್ರಪಂಚದಲ್ಲಿ 'ರಗಳೆಯ ಕವಿ' ಎಂದೇ ಹೆಸರಾದ ಹರಿಹರನದು ಒಂದು ದೊಡ್ಡ ಹೆಸರು. ಕನ್ನಡ ಸಾಹಿತ್ಯದ ನೂತನ 'ಯುಗಪ್ರವರ್ತಕ'ನೆಂದು ಹೆಸರು ಪಡೆದವ; ಪ್ರತಿಭಾವಂತ ವೀರಶೈವ ಕವಿ; ಬಹುಪಾಲು ಸಂಖ್ಯೆಯ ವೀರಶೈವ ಕವಿಗಳಿಗೆ ಮಾರ್ಗದರ್ಶಕ, ಆದರ್ಶವ್ಯಕ್ತಿ, ಚೈತನ್ಯಮೂರ್ತಿ- ಹೀಗೆ ನಾನಾ ಬಗೆಯಲ್ಲಿ ಹರಿಹರ ಕನ್ನಡ ಸಾಹಿತ್ಯೇತಿಹಾಸದಲ್ಲಿ ಗಮನಾರ್ಹ ವ್ಯಕ್ತಿಯಾಗಿರುವನು. ಡಿ.ಎಲ್.ನರಸಿಂಹಾಚಾರ್ಯರು ಹೇಳುವಂತೆ ಅವನೊಬ್ಬ ಕಾವ್ಯಯೋಗಿ.[೧] ಭಾಮಿನಿ ಷಟ್ಪದಿ ಎಂದಾಕ್ಷಣ ಕುಮಾರವ್ಯಾಸನು ನೆನಪಿಗೆ ಬರುವಂತೆ, ರಗಳೆ ಎಂದಾಕ್ಷಣ ಹರಿಹರ ನೆನಪಿಗೆ ಬರುತ್ತಾನೆ.

ಹಂಪೆಯನ್ನು ಕರ್ಮಭೂಮಿಯನ್ನಾಗಿಸಿಕೊಂಡಿದ್ದ ಈ ಮಹಾಕವಿ 'ಗಿರಿಜಾ ಕಲ್ಯಾಣ, ಅಷ್ಟಕಗಳು, ಶತಕಗಳಷ್ಟೇ ಅಲ್ಲದೆ, ನೂರಾರುರಗಳೆ'ಗಳನ್ನು ರಚಿಸಿದ್ದಾನೆ. ಕನ್ನಡಕ್ಕೆ ವಿಪುಲವಾದ, ಅರ್ಥವತ್ತಾದ, ಸ್ವಾರಸ್ಯಕರವಾದ ಕಾಣಿಕೆಯನ್ನು ಸಲ್ಲಿಸಿದ ಹಿರಿಯಕವಿ, ಭಕ್ತ, ಕ್ರಾಂತಿ ಪುರುಷ.

ಹರಿಹರ ತನ್ನ ವೈಯಕ್ತಿಕ ವಿಚಾರವಾಗುವುದನ್ನೂ ಹೇಳಿಕೊಂಡಿಲ್ಲ. ಅವನ ಜೀವನವನ್ನು ತಿಳಿಯಬೇಕಾದರೆ ಅವನ ಕೃತಿಗಳಲ್ಲಿ ವ್ಯಕ್ತವಾಗಿಯೋ, ಅವ್ಯಕ್ತವಾಗಿಯೋ ನುಸುಳುವ ಅಂಶಗಳನ್ನು ಆಯ್ದು ಸಂಗ್ರಹಿಸಿಕೊಳ್ಳಬೇಕು. ಅಲ್ಲದೆ ಇತರರ ಕೃತಿಗಳಿಂದ, ಬಾಹ್ಯ ಆಧಾರಗಳಿಂದ ದೊರೆಯುವ ಸಂಗತಿಗಳನ್ನು ಕಲೆಹಾಕಿ ತಿಳಿದುಕೊಳ್ಳಬೇಕು.

ಹರಿಹರನ ಕಾಲದ ವಿಚಾರವಾಗಿ ಈವರೆಗೆ ವಿಪುಲವಾದ ಚರ್ಚೆ ನಡೆದಿದೆ. ಆದರೂ ವಿದ್ವಾಂಸರು ಏಕಾಭಿಪ್ರಾಯಕ್ಕೆ ಬರಲಾಗಿಲ್ಲ. ಚರ್ಚೆಯ ವಿವರಗಳನ್ನು ಇಲ್ಲಿ ದಾಖಲಿಸಲು ಹೋಗುವುದಿಲ್ಲ. ಹರಿಹರನು ತನ್ನ ಕೃತಿಗಳ ರಚನಾಕಾಲವನ್ನೂ ಹೇಳಿಕೊಂಡಿಲ್ಲ. ಈತನ ಕಾಲವನ್ನು ವಿವೇಚಿಸುವಾಗ ಈತನ ಸಮಕಾಲೀನರಾಗಿದ್ದರೆಂದು ಪದ್ಮರಾಜಪುರಾಣವೇ ಮೊದಲಾದ ವೀರಶೈವ ಗ್ರಂಥಗಳಿಂದ ತಿಳಿದುಬರುವ ರಾಘವಾಂಕ, ಕೆರೆಯ ಪದ್ಮರಸರ ಕಾಲವನ್ನೂ ಪರಿಗಣಸಬೇಕಾಗಿದೆ. ಏಕೆಂದರೆ ರಾಘವಾಂಕ ಹರಿಹರನ ಸೋದರಳಿಯ. ಕೆರೆಯ ಪದ್ಮರಸನು ನರಸಿಂಹ ಬಲ್ಲಾಳನಲ್ಲಿ ಮಂತ್ರಿಯಾಗಿದ್ದನು. ಹರಿಹರ ಈ ನರಸಿಂಹ

೧. ವಚನ ಪಿತಾಮಹ : ಹರಿಹರಕವಿ ಮತ್ತು ಅವನ ಕೆಲವು ರಗಳೆಗಳು. ಪುಟ - ೩೨೫.

ಬಲ್ಲಾಳನಲ್ಲಿ ಕರಣಕನಾಗಿದ್ದನು. ಆದುದರಿಂದ ಇವರು ಮೂವರೂ ಸಮಕಾಲೀನರಾಗಿದ್ದರು.

ಹರಿಹರ ಕವಿಯ ಕಾಲದ ವಿಚಾರವಾಗಿ ಇದುವರೆಗೆ ನಡೆದಿರುವ ಸಂಶೋಧನೆಗಳ ಸಾರವನ್ನು ಗ್ರಹಿಸಿ ಆ ಕವಿ ೧೨ ನೆಯ ಶತಮಾನದ ಅಂತ್ಯ ಭಾಗದಲ್ಲೂ ೧೩ ರ ಆದಿ ಭಾಗದಲ್ಲೂ ಇದ್ದಿರಬೇಕೆಂಬ ತೀರ್ಮಾನಕ್ಕೆ ಬರಲಾಗಿದೆ.

ಪದ್ಮಣಾಂಕನ 'ಪದ್ಮರಾಜಪುರಾಣ'ದಲ್ಲಿ ಹರಿಹರನ ಜೀವಿತಕ್ಕೆ ಸಂಬಂಧಿಸಿದ ವಿಷಯಗಳು ಬರುತ್ತವೆ. ಅವನನ್ನೇ ಅನುಸರಿಸಿ ವಿರೂಪಾಕ್ಷಪಂಡಿತ ತನ್ನ 'ಚೆನ್ನಬಸವಪುರಾಣ'ದಲ್ಲಿಯೂ, ಸಿದ್ಧನಂಜೇಶನು ತನ್ನ 'ರಾಘವಾಂಕಚಾರಿತ್ರ' ಮತ್ತು 'ಗುರುರಾಜಚಾರಿತ್ರ'ಗಳಲ್ಲೂ, ಶಾಂತಲಿಂಗ ದೇಶಿಕನು ತನ್ನ 'ಭೈರವೇಶ್ವರಕಾವ್ಯದ ಕಥಾಮಣಿಸೂತ್ರರತ್ನಾಕರ'ದಲ್ಲಿಯೂ ಹರಿಹರನ ಸಂಗತಿಗಳನ್ನು ತಿಳಿಸುತ್ತಾರೆ. ಈ ಎಲ್ಲ ಕೃತಿಗಳಿಂದ ತಿಳಿದುಬರುವ ವಿಷಯಗಳನ್ನು ಹೀಗೆ ಸಂಗ್ರಹಿಸಬಹುದು :-

ಹರಿಹರನ ಊರು 'ಹಂಪೆ', ತಂದೆ 'ಮಹದೇವ' ಎಂಬ ಆರಾಧ್ಯ ಬ್ರಾಹ್ಮಣ. ತಾಯಿ 'ಶರ್ವಾಣಿ'. ಹರಿಹರನಿಗೆ 'ರುದ್ರಾಣಿ' ಎಂಬ ಅಕ್ಕನೊಬ್ಬಳಿದ್ದಳು. ಅವಳ ಮಗನೇ 'ರಾಘವಾಂಕ'. ಹರಿಹರನ ಗುರು 'ಮಾದರಸ'. ಗುರುವಿನಿಂದ ದೀಕ್ಷೆಯನ್ನು ಪಡೆದು ಹರಿಹರನೆಂಬ ಹೆಸರಿನಿಂದ ವಿರೂಪಾಕ್ಷನ ಪೂಜೆಯಲ್ಲೇ ಸದಾ ನಿರತನಾಗಿರುತ್ತಿದ್ದನು. ತರುವಾಯ ಶಿವನ ಆಜ್ಞೆಯಂತೆ ನರಸಿಂಹಬಲ್ಲಾಳನಲ್ಲಿ ಕರಣಿಕರ ಮುಖ್ಯಸ್ಥನಾಗಿ ಸೇರಿಕೊಂಡನು. ರಾಜ್ಯದ ಲೆಕ್ಕಪತ್ರಗಳನ್ನೆಲ್ಲಾ ವಿರೂಪಾಕ್ಷನ ಹೆಸರಿನಲ್ಲೇ ಬರೆದಿಡುತ್ತಿದ್ದನು. ಅದನ್ನು ನೋಡಿ ಉಳಿದ ಕರಣಿಕರು ರಾಜನಿಗೆ ಆ ವಿಷಯ ತಿಳಿಸಿದರು. ಅವರ ಮಾತಿನಂತೆ ಹರಿಹರನನ್ನು ಪರೀಕ್ಷಿಸಿದ ರಾಜ ನಿರುತ್ತರನಾದನು. ಆಗ ಹರಿಹರ ಒಂದೆರಡು ಪವಾಡಗಳನ್ನು ಮೆರೆಯುವನು. 'ಲೆಕ್ಕಗಳನ್ನೆಲ್ಲಾ ಮುಗಿಸುವವರೆಗೂ ಸೂರ್ಯನು ಚಲಿಸದಂತೆ ಮಾಡಿದನು. ಇದ್ದಕ್ಕಿದ್ದಂತೆ ತನ್ನ ಅಂಗೈಗಳನ್ನು ಮೇಲಕ್ಕೆತ್ತಿ ವಿರೂಪಾಕ್ಷ ಎಂದು ತಿಕ್ಕಿದನು'. ಅದರ ಅಂತರಾರ್ಥವನ್ನರಿಯದ ರಾಜ ಅದಕ್ಕೆ ಕಾರಣವನ್ನು ಕೇಳಲು 'ಪಂಪಾಕ್ಷೇತ್ರದಲ್ಲಿ ಪೂಜೆಯ ಕಾಲದಲ್ಲಿ ಎತ್ತಿದ ಆರತಿಯ ಸ್ಪರ್ಶದಿಂದ ಪರದೆಗೆ ಆವರಿಸಿದ ಜ್ವಾಲೆಯನ್ನು ಆರಿಸಿದೆ' ಎಂದು ಹೇಳಿದನು. ಆದರೆ ರಾಜ ನಂಬದಿರಲು, ಹರಿಹರನು ತನ್ನ ಅಂಗೈಗೆ ಅಂಟಿಕೊಂಡಿದ್ದ ಚಿಸಿಮಸಿಯನ್ನು ತೋರುವನು. ಅಲ್ಲಿಗೂ ವಿಶ್ವಾಸ ಹುಟ್ಟದ ರಾಜ ಸಹಚರರನ್ನು ಹಂಪೆಗೆ ಕಳಿಸಿ ಅದರ ಸತ್ಯಾಸತ್ಯತೆಯನ್ನು ತಿಳಿದುಕೊಳ್ಳುವನು. ಆಗ ಆತನಿಗೆ ಹರಿಹರನ ಮಹತ್ವದ ಅರಿವಾಗುವುದು. ಭಯಭರಿತನಾದ ರಾಜನು, ಹರಿಹರನಿಂದ ಸೇವೆಯನ್ನು ಕೊಳ್ಳುವುದು ಅನುಚಿತವೆಂದು ನಿಶ್ಚಯಿಸಿ, ಆತನಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಪಂಪಾ ವಿರೂಪಾಕ್ಷನ ಸೇವೆಯಲ್ಲಿರ್ಪುದು ಎನ್ನಲು, ಅಲ್ಲಿಂದ ಹರಿಹರ ಪಂಪಾಪುರದ ಕಡೆಗೆ ಹೊರಡುವನು.

ಹರಿಹರದ ಹರಿಹರೇಶ್ವರ ದೇವಾಲಯದಲ್ಲಿದ್ದ ಬ್ರಹ್ಮರಾಕ್ಷಸರನ್ನು ಓಡಿಸಿ ಎಂದಿನಂತೆ ಅಲ್ಲಿ ದೇವರಿಗೆ ಪೂಜೆ ನಡೆಯುವಂತೆ ಮಾಡಿದುದು, ಅಷ್ಟಕದ ರಚನೆಗೆ ಕಾರಣವಾದ ಮುಡಿಗೆಯ ಪ್ರಸಂಗ ಇವುಗಳೆಲ್ಲ ಹರಿಹರನೊಬ್ಬ 'ಪವಾಡಪುರುಷ' ಎಂಬಂತೆ ಚಿತ್ರಿಸಲು ಹುಟ್ಟಿಕೊಂಡಿರಬಹುದಾದ ದಂತಕಥೆಗಳೆಂದು ಭಾವಿಸಬಹುದು.

ಆತ್ಮಾಭಿಮಾನಿಯಾದ ಕವಿ ಪರಸೇವೆಯ ಕಷ್ಟವನ್ನು ಒಂದೆಡೆ ಈ ರೀತಿ ಉಲ್ಲೇಖಿಸಿದ್ದಾನೆ.

'ಪೋಗೆನೆ ಪೋಪ,ಬಾರೆಲವೊ, ಬಾರೆನೆ ಜೀಯ ಹಸಾದವೆಂದು
ಬೆಳ್ಳಾಗುತೆಬರ್ಪ,ಮಾಣೆಲವೊ ಸುಮ್ಮನಿರೆಂದೊಡೆ ಸುಮ್ಮನಿರ್ಪ,
ಮತ್ತಾಗಳೆ ಬಗ್ಗಿಸಲ್ ನಡುಗಿ ಬೀಳುವ, ಸೇವಿಪ ಕಷ್ಟವೃತ್ತಿಯಿಂ
ನೀಗಿದೆನೆಂದುನಿಮ್ಮದಯೆಯಿಂ ಕರುಣಾಕರಹಂಪೆಯಾಳ್ದನೇ'[೨]

ಎಂದು ಈ ರೀತಿಯಾಗಿ ಉಲ್ಲೇಖಿಸುತ್ತ, ಈ ಕಾರಣದಿಂದಾಗಿ ಹಾಗೂ ಪಾರಮಾರ್ಥಿಕ ಒಲವಿನಿಂದಾಗಿ ರಾಜಸೇವೆಯನ್ನು ಧಿಕ್ಕರಿಸಿ ಹರಿಹರ ಹಂಪೆಗೆ ಹೋಗಲು ಕಾರಣವಿರಬಹುದು ಎಂದು ಊಹಿಸಬಹುದು.

ಹರಿಹರನ ಉದಯದಿಂದ ಕನ್ನಡ ಸಾಹಿತ್ಯಕ್ಕೆ ಹೊಸಕಾಂತಿ ಮೂಡಿತು. ಸಾಹಿತ್ಯ ಕ್ಷೇತ್ರದಲ್ಲಿ ನವೀನ ಕಾವ್ಯ ಸ್ವರೂಪ, ವಸ್ತು ಭಾಷಾಬಳಕೆಗಳು ಬೆಳೆದು ಬಂದವು. ಈ ಹಿನ್ನೆಲೆಯಲ್ಲಿ ಹುಟ್ಟಿದ ಆತನ ಕೃತಿಗಳ ಸತ್ವ ಅನುಪಮವಾದವು. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ನೂತನ ಪರಂಪರೆಯೊಂದನ್ನು ಪ್ರಾರಂಭಿಸಿದ ಕೀರ್ತಿ ಸಲ್ಲುವುದು ಹರಿಹರನಿಗೆ. ಅಲ್ಲಿಯವರೆಗೂ ಪ್ರಚಲಿತವಾಗಿದ್ದ ಪ್ರೌಢ 'ಚಂಪೂ'ಮಾರ್ಗವನ್ನು ಬಿಟ್ಟು ಶುದ್ಧ 'ದೇಸೀ' ಮಾರ್ಗವನ್ನು ಅನುಸರಿಸಿದ್ದಾನೆ. ಜನಸಾಮಾನ್ಯಕ್ಕೆ ಸುಲಭವಾಗಿ ಅರ್ಥವಾಗಬಹುದಾದ ಭಾಷೆಯಲ್ಲಿ ಕೃತಿಗಳನ್ನು ರಚಿಸಿ ಒಂದು ನೂತನ ಅಧ್ಯಾಯ ತೆರೆದಿದ್ದಾನೆ. ಪ್ರಾಚೀನ ಸಂಪ್ರದಾಯವನ್ನು ದಿಟ್ಟತನದಿಂದ ಕಿತ್ತೊಗೆದು, ಕನ್ನಡ ಸಾಹಿತ್ಯಕ್ಕೆ ಒಂದು ಹೊಸ ತಿರುವನ್ನು ಕೊಟ್ಟನು.

ಹರಿಹರ ಸ್ವತಂತ್ರ ಮನೋವೃತ್ತಿಯವನು. ಯಾರ ಹಂಗಿಗೂ ಒಳಗಾದವನಲ್ಲ; ಯಾರಿಗೂ ಅಂಜುವವನಲ್ಲ. ನಿರ್ದಾಕ್ಷಿಣ್ಯ ಸ್ವಭಾವ. ಬಾಳಿನಲ್ಲಿ ಹೇಗೋ ಕಾವ್ಯದಲ್ಲಿಯೂ ಹಾಗೆಯೇ. ಅದುವರೆಗೆ ರಾಜಾಶ್ರಯದಲ್ಲಿ 'ವಸ್ತುಕ ಸಂಪ್ರದಾಯದ ಸಾಹಿತ್ಯ' ಬೆಳೆದು ಬಂದಿತ್ತು. ಅಷ್ಟಾದಶ ವರ್ಣನೆಗಳಿಂದ ಕೂಡಿ ಸಂಸ್ಕೃತ ಸಮಾಸಭೂಯಿಷ್ಟವಾದ ಚಂಪೂ ಶೈಲಿ ಪ್ರಚುರವಾಗಿತ್ತು. ಅದನ್ನು ತ್ಯಜಿಸಿ ಹರಿಹರ 'ವರ್ಣಕ ಸಂಪ್ರದಾಯದ ದೇಶೀಯವಾದ ಕಾವ್ಯ ಪದ್ಧತಿ'ಯನ್ನು ಜಾರಿಗೆ ತಂದ. ಸ್ವಯಂ ಚಂಪೂ ಕೃತಿ ಬರೆದನಾದರೂ ಅವನ ಭಾವಾವೇಶ ಪೂರ್ಣವಾದ ಅಭಿವ್ಯಕ್ತಿಗೆ ಆ ಶೈಲಿ ಅಳವಡಲಿಲ್ಲ. ಅಲ್ಲದೇ ಅವನ ಕಥನ ಪ್ರವಾಹಕ್ಕೆ ಸಂಸ್ಕೃತ

---

೨. ಶಿ.ಶಿ. ಬಸವನಾಳ, (ಸಂ) ರಕ್ಷಾಶತಕ ಮತ್ತು ಪಂಪಾಶತಕ, ಪುಟ ೩೩. ಪದ್ಯ ೮೮.

ಶಬ್ದಗಳಿಂದ ಪ್ರೌಢವಾದ ವೃತ್ತ ಕಂದಗಳು ಅಡಚಣೆಯಾದವು. ಆದ್ದರಿಂದ ನಿರರ್ಗಳವಾಗಿ ಓಡುವ ಶೈಲಿಯೊಂದನ್ನು ತಾನೇ ಆವಿಷ್ಕರಿಸಿಕೊಂಡ. ಪ್ರಾಕೃತದ ತ್ರಿಮಾತ್ರಕ, ಚತುರ್ಮಾತ್ರಕ ಛಂದಸ್ಸು ಮತ್ತು 'ಕಡವಕ' ಸಂಪ್ರದಾಯ ಅವನಿಗೆ ಹದವಾಗಿ ಒದಗಿತು. 'ರಘಟಾ' ಎಂಬುದನ್ನೇ 'ರಗಳೆ'ಯೆಂದಾಗಿಸಿ ಪುರಾತನ ನೂತನ ಶಿವಶರಣರ ಕಥೆಗಳನ್ನು ಬರೆದ. ಕಾವ್ಯದ ನಡುನಡುವೆ ವೈವಿಧ್ಯಕ್ಕಾಗಿ ತನ್ನದೇ ಆದ ವಿಶಿಷ್ಟ ರೀತಿಯ ಗದ್ಯವನ್ನು ಬಳಸಿದ.

ಹರಿಹರನು ಹಾಕಿಕೊಟ್ಟ ಮತ್ತೊಂದು ಮೇಲ್ಪಂಕ್ತಿಯೆಂದರೆ ಆಶ್ರಯದಾತರ ಮೇಲೆ ಕೃತಿರಚನೆಗೈಯದಿರುವುದು. ಕನ್ನಡ ಸಾಹಿತ್ಯದಲ್ಲಿ, ಪೋಷಕರ ಮೇಲಾಗಲಿ, ಆಶ್ರಯದಾತರ ಮೇಲಾಗಲಿ, ಆಳರಸರ ಮೇಲಾಗಲಿ ಕೃತಿಗಳನ್ನು ರಚಿಸುತ್ತಿದ್ದುದ್ದು ಆವರೆಗಿನ ಒಂದು ಸಂಪ್ರದಾಯವಾಗಿತ್ತು. ರಾಜನ ಆಶ್ರಯದಲ್ಲಿ ಬದುಕುತ್ತಿದ್ದ ಹಿಂದಿನ ಕವಿಗಳು ರಾಜನ ಹಂಗಿಗೆ ಒಳಗಾಗಿ, ಋಣ ತೀರಿಸಲು ರಾಜನನ್ನು ಸ್ತುತಿಸುವುದೂ ಅವರಿಗೆ ಅವಶ್ಯವಾಗುತ್ತಿತ್ತು. ಅದನ್ನು ಸಹಿಸದಾದ ಹರಿಹರ–

"ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲೆಯಿಕ್ಕಟಾ
ತನತನಗಿಂದ್ರ ಚಂದ್ರ ರವಿ ಕರ್ಣ ದಧೀಚಿ ಬಲೀಂದ್ರನೆಂದು ಮೇಣ್
ಅನವರತಂ ಪೊಗಳ್ದು ಕೆಡಬೇಡಲೆ ಮಾನವ ನೀನಹರ್ನಿಶಂ
ನೆನೆ ಪೊಗಳರ್ಚಿಸೆಮ್ಮ ಕಡುಸೊಂಪಿನ ಪೆಂಪಿನ ಹಂಪೆಯಾಳ್ದನಂ".[೩]

ರೀತಿ ತರುವಾಯದ ಕವಿಗಳಿಗೆ ಬುದ್ಧಿವಾದವನ್ನು ಹೇಳಿ, ಅದರಂತೆಯೇ ನಡೆದ.

ಕಾವ್ಯವಸ್ತುವಿನ ವಿಷಯದಲ್ಲಿಯೂ ಅವನದು ಕ್ರಾಂತಿಯೇ. ರಾಜರುಗಳೋ, ರಾಮಾಯಣ, ಮಹಾಭಾರತ ಪುರಾಣಗಳಿಂದ ಆಯ್ದು ಸಂಗತಿಗಳೋ ಅದುವರೆಗೆ ಕಾವ್ಯ ವಸ್ತುವಾಗುತ್ತಿದ್ದವು. ಹರಿಹರ ಜನಸಾಮಾನ್ಯರ ಶಿವಶರಣರ ಜೀವಿತವನ್ನೇ ತನ್ನ ಕಾವ್ಯಕ್ಕೆ ವಸ್ತುವಾಗಿಸಿಕೊಂಡ. ಅರಮನೆಯಲ್ಲಿ ಅದುವರೆಗೆ ರಾಜರಿಗೆ ಬೀಸುವ ಚಾಮರವಾಗಿದ್ದ ಸಾಹಿತ್ಯವನ್ನು ಜನಸಾಮಾನ್ಯರ ಮನದ ಮಲೀನತೆಯನ್ನು ಗುಡಿಸಿ ನಿರ್ಮಲಗೊಳಿಸುವ ಪೊರಕೆಯನ್ನಾಗಿ ಪರಿವರ್ತಿಸಿದ ಹರಿಹರ. ಜನ ಬದುಕಲೆಂದು ಸಾಹಿತ್ಯ ರಚನೆಯಾಗ ತೊಡಗಿತು. ಪಾಂಡಿತ್ಯದ ಭಾಷೆ ಸರಳಗೊಂಡು ಜನಸಾಮಾನ್ಯರ ಭಾಷೆಗೆ ತಿರುಗಿತು. ವಿನಾಕಾರಣ ಬರವಣಿಗೆಗೆ ತೊಡಕಾಗಿದ್ದ ಱಕುಳ ಕ್ಷಳಗಳಿಗೆ ಒಂದೇ ರೂಪ ಕೊಟ್ಟ.

ಹರಿಹರನ ಪಂಥವನ್ನು ತರುವಾಯದ ಕೆಲವಾರು ಕವಿಗಳು ಮೆಚ್ಚಿ ಅನುಸರಿಸಿದ್ದಾರೆ. ಇವನ ತರುವಾಯದ ಕೆಲವಾರು ಕವಿಗಳಂತೂ ತಪ್ಪದೆ ಹರಿಹರನನ್ನು ಸ್ಮರಿಸಿದ್ದಾರೆ. ಹೊಸ ಕಾವ್ಯ ಸಂಪ್ರದಾಯವನ್ನು ನಿರ್ಮಿಸಿ, ಅನೇಕ ಕೃತಿಗಳನ್ನು ರಚಿಸಿ, ಭಕ್ತಕವಿ ಎಂಬ ಖ್ಯಾತಿಗೆ ಪಾತ್ರವಾದ ಹರಿಹರ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ವಿಶಿಷ್ಟ ಸ್ಥಾನ ಪಡೆದಿದ್ದಾನೆ. ಆದರೆ ಈತ ನಿರ್ಮಿಸಿದ ರಗಳೆ ಕಾವ್ಯ

---

೩. ಅಡಿಟಿಪಣಿ ೨೦ರಂತೆ. ಪುಟ ೩.೨. ಪದ್ಯ ೮೨

ಸಂಪ್ರದಾಯ ಈತನ ಅನಂತರ ಚಾಲನೆಗೊಳ್ಳದೆ ಕನ್ನಡ ಸಾಹಿತ್ಯದಲ್ಲಿ ಸ್ಥಗಿತಗೊಂಡಿದ್ದು ಮಾತ್ರ ಆಶ್ಚರ್ಯಕರ ಸಂಗತಿಯಾಗಿದೆ.

ರಾಘವಾಂಕನು ರಚಿಸಿರುವನೆಂದು ಹೇಳುವ 'ಹರಿಹರಮಹತ್ವ' ಸಿಕ್ಕಿದ್ದೇ ಆದರೆ ಹರಿಹರನ ಬಗೆಗಿನ ಎಷ್ಟೋ ಸಮಸ್ಯೆಗಳು ಬಗೆಹರಿಯಬಹುದೆಂದು ತೋರುತ್ತದೆ. ಏಕೆಂದರೆ ರಾಘವಾಂಕ ಹರಿಹರನ ಸೋದರಳಿಯ, ಶಿಷ್ಯ, ಜೊತೆಯಲ್ಲೇ ಇದ್ದು ಹರಿಹರನ ಜೀವಿತವನ್ನ ಕಂಡಿದ್ದವನು, ಪ್ರತ್ಯಕ್ಷವಾಗಿ ಗುಣ ಸ್ವಭಾವಗಳನ್ನು ಅರಿತಿದ್ದವನು. ಆದ್ದರಿಂದ ಅವನು ಹೇಳುವ ಸಂಗತಿಗಳು ಅಧಿಕಾರಯುಕ್ತವಾಗಿದ್ದವು.

ಹರಿಹರನ ಪ್ರತಿಭಾ ಸಾಮರ್ಥ್ಯವನ್ನು ಅರಿಯಲು ರಗಳೆಗಳು ನಮಗಿಂದು ಆಧಾರವಾಗಿವೆ. ಹಳೆಗನ್ನಡ ಕಾವ್ಯಗಳಲ್ಲಿ ನಿರ್ದಿಷ್ಟ ಬಗೆಯ ವರ್ಣನೆಗೆಂದು ಅಲ್ಲೊಂದು ಇಲ್ಲೊಂದು ಬಳಕೆಯಾಗುತ್ತಿದ್ದ ರಗಳೆಯು ಪೂರ್ಣ ಕಾವ್ಯವೊಂದರ ಛಂದೋಮಾಧ್ಯಮವಾದುದು ಹರಿಹರನಲ್ಲಿ. 'ರಗಳೆಯ ಕವಿ' ಎಂದೇ ಕರೆಸಿಕೊಂಡ ಹರಿಹರ ರಚಿಸಿರುವ ರಗಳೆಗಳೆಷ್ಟು? ಯಾವುವು? ಎಂಬುದು ಒಂದು ಕ್ಲಿಷ್ಟ ಸಮಸ್ಯೆ. ರಗಳೆಗಳನ್ನು ಕುರಿತಂತೆ ಹಲವಾರು ವಿದ್ವಾಂಸರು ಕೆಲಸ ಮಾಡಿದ್ದಾರೆ, ಮಾಡುತ್ತಲೇ ಇದ್ದಾರೆ. ಹರಿಹರನ ರಗಳೆಗಳ ಸಂಖ್ಯಾನಿರ್ಣಯಕ್ಕೆ ಒಂದು ಇತಿಹಾಸವಿದೆ. ಅನೇಕ ವೀರಶೈವ ಕವಿಗಳು ಈತನನ್ನು ಸ್ಮರಿಸುವಾಗ ಶಿವನನ್ನು ಶಿವಗಣಗಳನ್ನು ಕುರಿತು ರಗಳೆಗಳನ್ನು ರಚಿಸಿದವನು ಎಂದು ಮಾತ್ರ ಈತನ ಬಗೆಗೆ ಹೇಳಿ ಮುಂದುವರಿದಿದ್ದಾರೆ. ಎಷ್ಟು ರಗಳೆಗಳನ್ನು ರಚಿಸಿದ್ದಾನೆ, ಯಾವುವು? ಎಂಬುದನ್ನು ಹೇಳಲೇ ಇಲ್ಲ.

ಹರಿಹರನ ರಗಳೆಗಳ ಸಂಖ್ಯಾನಿರ್ಣಯ ಇಂದಿಗೂ ಒಂದು ಸಮಸ್ಯೆ. ಈ ಸಮಸ್ಯೆಗೆ ಕಾರಣ ಹರಿಹರ ಎಲ್ಲೂ ತಾನು ರಚಿಸಿರುವ ರಗಳೆಗಳ ಪೂರ್ಣ ಸಂಖ್ಯೆಯನ್ನು ತಿಳಿಸದಿರುವುದು, ಈತನ ರಗಳೆಗಳೆಲ್ಲ ಒಂದೇ ಓಲೆಕಟ್ಟಿನಲ್ಲಿ ಇದುವರೆವಿಗೂ ಲಭ್ಯವಾಗದಿರುವುದು ಇತ್ಯಾದಿ.

ಹರಿಹರನು ಪುರಾತನಭಕ್ತರ ಮೇಲೆಯೂ, ನೂತನ ಪುರಾತನರ ಮೇಲೆಯೂ ರಗಳೆಗಳನ್ನು ರಚಿಸಿದ್ದಾನೆ. ಆತ ರಚಿಸಿರುವ ಒಟ್ಟು ರಗಳೆಗಳ ಸಂಖ್ಯೆ ಎಷ್ಟು ಎಂಬುದು ಇನ್ನೂ ಖಚಿತವಾಗಿ ತಿಳಿದು ಬಂದಿಲ್ಲ. ಹರಿಹರದೇವನು ಎಷ್ಟು ಜನ ಪುರಾತನ ಶಿವಭಕ್ತರನ್ನುದ್ದೇಶಿಸಿ ರಗಳೆಗಳನ್ನು ಬರೆದನೆಂಬುದುದು ತಿಳಿದಿಲ್ಲ. ಆದರೆ ಅವನು ಅವರ ಚರಿತ್ರೆಯನ್ನು ಬರೆದಿರುವನೆಂಬಲ್ಲಿ ಯಾವ ಅನುಮಾನವೂ ಇಲ್ಲ.

ಹರಿಹರನ ರಗಳೆಗಳ ಸಂಖ್ಯಾನಿರ್ಣಯದ ಬಗ್ಗೆ ಕೆಲವು ವಿದ್ವಾಂಸರುಗಳು ಮಂಡಿಸಿರುವ ಅಭಿಪ್ರಾಯಗಳು ಹೀಗಿವೆ.

ಕರ್ನಾಟಕ ಕವಿ ಚರಿತೆಕಾರರು "ರಗಳೆಗಳ ಸಂಖ್ಯೆ ಇಷ್ಟೇ ಎಂದು ನಿರ್ಧರಿಸಲಾಗುವುದಿಲ್ಲ; ಕೆಲವರು ೧೦೧ ರಗಳೆಗಳೆಂದು, ಕೆಲವರು ೧೨೦ ರಗಳೆಗಳೆಂದು ಹೇಳುತ್ತಾರೆ"[೪]ಂದು 'ಕರ್ನಾಟಕ ಕವಿಚರಿತೆಕಾರರು ತಮ್ಮ ಅನಿರ್ಧಾರಿತ ಮತ ಮಂಡಿಸುವರು.

ರಂ.ಶ್ರೀ.ಮುಗಳಿಯವರು "ಈ ರಗಳೆಗಳೆಷ್ಟು ಎಂಬುದು ಖಚಿತವಾಗಿ ತಿಳಿದಿಲ್ಲ. ಉಪಲಬ್ಧವಾದ ಸಂಗ್ರಹಗಳನ್ನು ನೋಡಿದರೆ ೧೯ ರವರೆಗೆ ಇವು ಇರಬಹುದೆಂದು ತೋರಿದೆ."[೫] ಎಂಬ ಅಭಿಪ್ರಾಯಕ್ಕೆ ಬಂದಿರುವರು.

"ತಿರುನೀಲಕಂಠರಗಳೆಯ ಮೊದಲ ಕಂದ ಪದ್ಯದಲ್ಲಿ 'ಧರೆಯೊಳೆಯಲ್ತನುವೆರೆಸಿಯೆ। ನೆರೆಸಂದಱುವತ್ತ ಮೂವರೊಳ್ಮೊದಲ ಮಹೇ। ಶ್ವರರ ತಿರುನೀಲಕಂಠರ' ಎಂದು ಉಲ್ಲೇಖವಿರುವುದರಿಂದ ೬೩ ಪುರಾತನರನ್ನು ಕುರಿತು ಹರಿಹರನು ರಗಳೆಗಳನ್ನು ಬರೆದಿರಬಹುದೆಂಬ ಸೂಚನೆ ದೊರೆಯುತ್ತದೆ. ಆದ್ದರಿಂದ ಪುರಾತನರ ರಗಳೆ ೬೩ ನೂತನರ ರಗಳೆ ೨೦ ಸಂಕೀರ್ಣರಗಳು ೬ ಅಂತೂ ಒಟ್ಟು ೬೨ ರಗಳೆಗಳು ಹರಿಹರನಿಂದ ರಚಿತವಾದುವೆಂದು ಫ.ಗು.ಹಳಕಟ್ಟಿಯವರು ಅಭಿಪ್ರಾಯ ಪಟ್ಟಿರುವರು".[೬]

ಎಚ್.ದೇವಿರಪ್ಪನವರು "ಹರಿಹರ ಕೃತ ಪುರಾತನರ ರಗಳೆಗಳು ೨೩ ಇತರ ರಗಳೆಗಳು ೩೭ ಅಂತೂ ಒಟ್ಟುಹರಿಹರನ ರಗಳೆಗಳ ಸಂಖ್ಯೆ ೬೦ ಎಂದು ತೀರ್ಮಾನಿಸಿರುವರು"[೭].

ಇವರು ನೀಡುವ ಪುರಾತನ ರಗಳೆಗಳ ಪಟ್ಟಿ ಇಂತಿದೆ.

೧. ತಿರುನೀಲಕಂಠರು
೨. ಇಹಪ್ಪಗೆಯಾಂಡರು.
೩. ಇಳೆಯಾಂಡಗುಡಿಮಾಡಿರಿ.
೪. ಮೆಱೆಮಿಂಡ ದೇವರು.
೫. ಸೇದಿರಾಜರರ
೬. ಅಮರ ನೀತಿಗಳು.
೭. ಇರಿಭಕ್ತರು.
೮. ಏಣಾಧಿನಾಥರು.
೯. ಕಣ್ಣಪ್ಪದೇವರು
೧೦. ಕೊಂಗುಲಿಯ ಕಲಿಯರು.
೧೧. ಮಾನಕಂಜರು.
೧೨. ಅರಿವಾಳ್ತಾಂಡರು.
೧೩.ಆನಾಯನಾರರು.
೧೪.ಒಲಘಾಂಡಮೂರ್ತಿಗಳು.
೧೫.ನಮಃ ಶಿವಾಯ ಮುರುಘರು.
೧೬. ರುದ್ರಪಶುಪತಿಗಳು.
೧೭. ತಿರುನಾಳ್ಪೋವರು.
೧೮. ತಿರುಕುರುಪ್ಪೆಯ ತೊಂಡರು.
೧೯. ಚೆಂಡೇಶ ಪಿಳ್ಳೆಗಳು.
೨೦. ವಾಗೀಶದೇವರು.
೨೧. ಕಾರಿಕಾಲಮ್ಮೆಯರು.
೨೨. ಕಲಿಕಾಮದೇವರು.
೨೩. ನಂಬಿಯಣ್ಣಗಳು.

---

೪. ಉದ್ಧೃತ: ಕರ್ಣಾಟಕ ಕವಿಚರಿತ, ಸಂಪುಟ-೩, ಎಸ್ .ವಿದ್ಯಾಶಂಕರ್ ಪುಟ-೨೪೫
೫. ಕನ್ನಡ ಸಾಹಿತ್ಯ ಚರಿತ್ರೆ, (೧೯೬೪) ಪುಟ-೧೮೫
೬. ಅದೇ ಟಿಪ್ಪಣಿ ೪ರಂತೆ ಪುಟ-೨೪೫
೭. ಶರಣಚರಿತಮಾನಸಂ : ಪೀಠಿಕೆ, ಪುಟ-೩೦-೩೧

ಹಿರೇಮಲ್ಲೂರು ಈಶ್ವರನ್‌ರವರು "ಹರಿಹರ ಕವಿ ರಚಿಸಿರುವ ರಗಳೆಗಳ ಸಂಖ್ಯೆ ೧೦೬ಎಂದು, ೧೦೬ ರಗಳೆಗಳಲ್ಲಿ ೫೯ ರಗಳೆಗಳು ಪುರಾತನರ ಮೇಲೆ ರಚಿತವಾದವು. ಕನ್ನಡ ದೇಶದ ಪುರಾತನರ ಮೇಲೆ ರಚಿತವಾದ ರಗಳೆಗಳ ಸಂಖ್ಯೆ ೦೨"[೮] ಎಂಬ ನಿರ್ಣಯಕ್ಕೆ ಬಂದಿರುತ್ತಾರೆ.

ಇವರು ನೀಡುವ ಹರಿಹರ ವಿರಚಿತ ಪುರಾತನರ ರಗಳೆಗಳು.

೧. ಅತಿಭಕ್ತ
೨. ಅಮರನೀತಿ
೩. ಅಯ್ಯಿಡಿ
೪. ಅರಿವಾಳ್ತಾಂಡ
೫. ಅಃಪೂತಿ
೬. ಆನಾಯನಾರ
೭. ಇರಿಭಕ್ತ.
೮. ಇಹಃ ಪಗೆಯಾಂಡ.
೯. ಇಳೆಯಾಂಡಗುಡಿಮಾರ
೧೦. ಎಡೆಗೆಣೆಯ ಪೆರುಮಾಳೆ
೧೧. ಏಣಾದಿನಾಥ
೧೨. ಒಲಘಾಂಡಮೂರ್ತಿ
೧೩. ಕಡವೂರ ಶಾರಿ
೧೪. ಕಣಂಬುಲ್ಲ ನಂಬಿ
೧೫. ಕಣ್ಣಪ್ಪ
೧೬. ಕಲಿಕಂಪ
೧೭. ಕಲಿಕಾಮದೇವ
೧೮. ಕಲಿಯ ನಾಯ್ನಾರ
೧೯. ಕಳೆಚೆಂಗ ಚೋಳ
೨೦. ಕಳೆಚೆಂಗ ಪೆರುಮಾಳೆ
೨೧. ಕಾರಿಕಾಲಮ್ಮೆ
೨೨. ಕುಲಚ್ಚೆರಿ
೨೩. ಕೊಂಗುಲಿಯ ಕಲಿಯ
೨೪. ಕೊಲ್ಲುಲಿ
೨೫. ಗಣನಾಥದೇವ
೨೬. ಚಂಡೇಶಪಿಳ್ಳೆ
೨೭. ಚಿರುತ್ತೊಣೆಯಾಂಡ.
೨೮. ಚೇರಮ
೨೯. ಜೆಡೆಯನಾಯ್ನಾರೆ ಸುಜ್ಞಾನಿದೇವಿ.
೩೦. ತಿರುನೀಲಕಂಠ
೩೧. ತಿರುನೀಲಕಂಠ ಪಾಣ
೩೨. ತಿರುನೀಲನಕ್ಕ
೩೩. ತಿರುಕುರುಂಪೆಯ ತೊಂಡ
೩೪. ತಿರಿನಾಳ್ಪೋವ
೩೫. ತಿರುಮೂಲದೇವ
೩೬. ನಂಬಿಯಣ್ಣ
೩೭. ನಮಃ ಶಿವಾಯ ಮುರುಘ
೩೮. ನಮಿನಂದಿ
೩೯. ನರಸಿಂಗಮೊನೆ
೪೦. ನಿಡುಮಾರದೇವ
೪೧. ನೈಶ
೪೨. ಪಗಲ್ತೊಣೆಯಾಂಡ
೪೩. ಪಾಂಡ್ಯ-ಮಹಾದೇವಿ
೪೪. ಪೂಸಲೆಯಾಂಡ
೪೫. ಪೆರುಮಳಲಿಯ ಕುರುಂಬ
೪೬. ಮಾನಕಂಜಾರ
೪೭. ಮೂರ್ಖ
೪೮. ಮೆರೆಮಿಂಡದೇವ
೪೯. ಮೊನೆಯಿಡುವ
೫೦. ರುದ್ರಪಶುಪತಿ
೫೧. ವರದಂಡಿಭಕ್ತ
೫೨. ವರಕೃತಾಂತ
೫೩. ವರಶಕ್ತಿಯಾರ್
೫೪. ವಾಗೀಶ್ವರ
೫೫. ವಾಯಿಲಾರ
೫೬. ಸಾಂಖ್ಯತೊಂಡ
೫೭. ಸಿರಿಯಾಳ
೫೮. ಸೇದಿರಾಜ

---

೮. ಹರಿಹರನಕೃತಿಗಳು (ಒಂದು ಸಂಖ್ಯಾ ನಿರ್ಣಯ) ಪುಟ ೩೮-೮೪,೪೪೦-೪೪೨

೫೯. ಸೋಮಾಸಿಮಾರ.

ಪುರಾತನ ಹೆಸರಿನಲ್ಲಿ ಇನ್ನೆರಡು ರಗಳೆಗಳು

೬೦. ಚನ್ನಯ್ಯ(ಮಾದರ) ೬೧. ನಂಬಿಯಕ್ಕ

ಹರಿಹರ ರಚಿಸಿದ ರಗಳೆಗಳ ಸಂಖ್ಯೆ ಖಚಿತವಾಗಿ ತಿಳಿದುಬರುವುದಿಲ್ಲ. ಈ ವಿಷಯದಲ್ಲಿ, ವಿದ್ವಾಂಸರಲ್ಲಿ ಒಮ್ಮತಾಭಿಪ್ರಾಯವಿಲ್ಲದಿರುವುದು ನಮ್ಮ ಗಮನಕ್ಕೆ ಬರುತ್ತದೆ. ವಿದ್ವಾಂಸರುಗಳು ಕೊಡುವ ಹರಿಹರನ ರಗಳೆಗಳ ಸಂಖ್ಯೆಯಲ್ಲಿ ತಮಿಳುದೇಶದ ಅರವತ್ತುಮೂರು ಪುರಾತನ ಶಿವಭಕ್ತರ ಕಥೆಗಳು, ಅಲ್ಲಮಪ್ರಭು, ಬಸವಣ್ಣ, ಸಿದ್ಧರಾಮ, ಅಕ್ಕಮಹಾದೇವಿ ಮೊದಲಾದ ಕನ್ನಡನಾಡಿನ ಶರಣ-ಶರಣೆಯರೂ ಅಲ್ಲದೆ, ಪುಷ್ಪರಗಳೆ, ವಿಭೂತಿ, ರುದ್ರಾಕ್ಷಿ ಮುಂತಾದವುಗಳ ಮಹಿಮೆಯನ್ನು ಬಣ್ಣಿಸುವ ರಗಳೆಗಳೂ ಸೇರಿವೆ.

## ಆ) ಶೇಕ್ಕಿಳಾರನ ಇತಿವೃತ್ತ :

ಹನ್ನೊಂದನೆಯ ಶತಮಾನದ ಉತ್ತರಾರ್ಧದಲ್ಲಿಯೂ ಹನ್ನೆರಡನೆಯ ಶತಮಾನದ ಆರಂಭದಲ್ಲಿಯೂ ತಮಿಳು ದೇಶದಲ್ಲಿ ಒಬ್ಬ ಪ್ರಖ್ಯಾತ ಕವಿಯು ಜೀವಿಸಿದ್ದನು. 'ಶೇಕ್ಕಿಳಾರ್ ಅರುಣ್ಮೊಳಿತ್ತೇವರ್'ಎಂಬುದು ಆತನ ಹೆಸರು. ಶೇಕ್ಕಿಳಾರ್ ಎಂಬುದು ಇವನ ವಂಶದ ಹೆಸರು. ತಮಿಳುನಾಡಿನ ಒಂದು ಭಾಗವಾದ ತೊಂಡೈಮಂಡಲದಲ್ಲಿ ಪುಲಿಯೂರ್‌ಕೋಟ್ಟಂ ಎಂಬುದು ಒಂದು ಜಿಲ್ಲೆ. ಅಲ್ಲಿ 'ಕುನ್ರತ್ತೂರ್'ಎಂಬುದು ಅದೇ ಹೆಸರಿನ ತಾಲ್ಲೂಕಿನ ಪ್ರಧಾನ ಗ್ರಾಮ. ಆ ಗ್ರಾಮದಲ್ಲಿ ಶೇಕ್ಕಿಳಾರ್ ಎಂಬ ಒಂದು ಪ್ರಸಿದ್ಧ ಮನೆತನ. ಈ ಮನೆತನದ ಪೂರ್ವಜರು ಸೇವೂರ್ ಎಂಬಲ್ಲಿನ 'ಕಿಳಾರ್'(ಜಮೀನುದಾರರು) ಆಗಿದ್ದರು. ಕಾರಣಾಂತರಗಳಿಂದ ಸೇವೂರನ್ನು ಬಿಟ್ಟು ಬಂದು ಕುನ್ರತ್ತೂರಿನಲ್ಲಿ ನೆಲೆಸತೊಡಗಿದ ಅವರನ್ನು 'ಸೇವೂರ್‌ಕಿಳಾರ್'ಎಂದೇ ಕರೆಯುತ್ತಿದ್ದರು. ಅದು ಬರುಬರುತ್ತಾ ಶೇಕ್ಕಿಳಾರ್ ಎಂದಾಯಿತು.

ಚೋಳದೇಶವನ್ನು ಆ ಕಾಲದಲ್ಲಿ 'ಅನಪಾಯಿಚೋಳ' ಅಥವಾ ಕುಲೋತ್ತುಂಗಚೋಳನೆಂಬ ದೊರೆಯು ಆಳುತ್ತಿದ್ದನು. ಶೇಕ್ಕಿಳಾರ್‌ನ ಪಾಂಡಿತ್ಯ ಹಾಗೂ ಪ್ರತಿಭೆಯನ್ನು ಗುರುತಿಸಿ ದೊರೆ ಈತನನ್ನು ತನ್ನ ಪ್ರಧಾನಮಂತ್ರಿಯನ್ನಾಗಿ ಮಾಡಿಕೊಂಡನು. ಒಮ್ಮೆ ದೊರೆ ಅನಪಾಯಿಚೋಳನು ಜಿನಸೇನಾಚಾರ್ಯನ ಮಹಾಪುರಾಣದಲ್ಲಿ ಕಂಡುಬರುವ ಜೀವಕನ ಜೀವನ ವೃತ್ತಾಂತವನ್ನು ತಿಳಿಯಪಡಿಸುವ 'ಚಿಂತಾಮಣಿ 'ಯೆಂಬ ಜೈನ ಕೃತಿಯೊಂದನ್ನು ಓದುತ್ತಾ ಓದುತ್ತಾ ಅದರ ತತ್ವಗಳಿಗೆ ಮನಸೋತ ಬಗೆಯನ್ನು ಶೇಕ್ಕಿಳಾರನು ಗುರುತಿಸಿದನು.ಇದು ಧಾರ್ಮಿಕ ಮನೋಭಾವದ ಶೇಕ್ಕಿಳಾರನ ಮನಸ್ಸನ್ನು ವಿಶೇಷವಾಗಿ ನೋಯಿಸಿತು. ತನ್ನ ದೊರೆ ಜೈನಮತವನ್ನಪ್ಪುವುದರಲ್ಲಿದ್ದಾನೆ ಎಂಬುದನ್ನು ತಿಳಿದುಕೊಂಡು ರಾಜನ ಪ್ರೀತಿಗೆ

ಪಾತ್ರವಾಗಿದ್ದ ಇದನ್ನು 'ಇಹಪರ ಸಾಧನಕ್ಕೆ ಸಹಾಯಮಾಡದ ಸುಳ್ಳು ಕಥೆ'ಯೆಂದು ಖಂಡಿಸಿದನು. ಹಾಗಾದರೆ ನಿಜವಾದ ಧರ್ಮವಾವುದೆಂದು ರಾಜನು ಪ್ರಶ್ನಿಸಲು, ಶೇಕ್ಕಿಳಾರನು "ಮಹಾಸ್ವಾಮಿಗಳೇ ಶೈವಧರ್ಮದಲ್ಲಿಯೂ ಶ್ರೇಷ್ಠ ತತ್ವಗಳನ್ನು ಉದ್ಘೋಷಿಸುವ ಕೃತಿಗಳಿವೆ" ಎಂದು ಹೇಳಿ ಶೈವಧರ್ಮದ ಉತ್ಕೃಷ್ಟತೆಯನ್ನು ತಿಳಿಸಿ, ಆ ಧರ್ಮವನ್ನು ಆಚರಿಸಿ ಪರಮಪದವನ್ನು ಪಡೆದವರೂ ಪ್ರಖ್ಯಾತರೂ ಆದ ಅರವತ್ತು ಮೂವರು ಪುರಾತನ ನಾಯನಾರರ ವಿಷಯವನ್ನು ಸುಂದರಮೂರ್ತಿ ನಾಯನಾರರ 'ತಿರುತ್ತೊಂಡತ್ತೊಗೈ' ಮತ್ತು ನಂಬಿ ಆಂಡಾರ್ ನಂಬಿಗಳ 'ತಿರುತ್ತೊಂಡರ್‌ತಿರುವನ್ದಾದಿ' ಗಳಿಂದ ಓದಿ ಹೇಳಿದನು. ಅರಸನು ಶೇಕ್ಕಿಳಾರನ ಬಾಯಿಂದಲೇ ಆ ಗ್ರಂಥದ ವಿವರಣೆಯನ್ನು ಪಡೆದು ಹಿಗ್ಗಿ, ಅದರ ಪರಿಣಾಮವಾಗಿ ಮತ್ತೆ ಶೈವಧರ್ಮದ ಬಗೆಗೆ ವಿಶೇಷ ಅಭಿಮಾನವನ್ನು ತಾಳಿ "ಶೇಕ್ಕಿಳಾರ್, ಈ ಗ್ರಂಥವನ್ನು ನೀನು ವಿಸ್ತರಿಸಿ ಬರೆಯಬೇಕು" ಎಂದು ಹೇಳಿ, ಅವನಿಗೆ ಬೇಕಾದ ಎಲ್ಲ ಅನುಕೂಲಗಳನ್ನು ಒದಗಿಸಿಕೊಟ್ಟನು.

ದೊರೆಯ ಆಜ್ಞೆಯ ಮೇರೆಗೆ ಶೇಕ್ಕಿಳಾರನು ಗ್ರಂಥವನ್ನು ಬರೆಯಲು ಒಪ್ಪಿಕೊಂಡು ಗ್ರಂಥಕ್ಕೆ ಬೇಕಾಗುವ ಸಾಧನ ಸಾಮಗ್ರಿಗಳನ್ನು ಸಂಗ್ರಹಿಸಲು ಚಿದಂಬರದ ಕಡೆಗೆ ಸಂಚಾರ ಹೊರಟನು. ತ್ರಿಲೋಕನಾಥನಾದ ನಟರಾಜನ ಸಾನ್ನಿಧ್ಯವೇ ಗ್ರಂಥರಚನೆಗೆ ಸರಿಯೆಂದು ಅಲ್ಲೆ ನೆಲೆಸಿ ದೈವೀಪ್ರೇರಣೆಯಿಂದ ಗ್ರಂಥವನ್ನು ಬರೆದನು. ಪುರಾಣವನ್ನು ಹೇಗೆ ಪ್ರಾರಂಭಿಸಬೇಕೆಂಬುದು ಶೇಕ್ಕಿಳಾರನ ಯೋಚನೆಯಾಯಿತು ಒಂದು ದಿವಸ ಅವನುದೇವದೇವನಾದ ಚಿದಂಬರನಾಥನ ಬಳಿನಿಂತು ಯಾವ ಮಂಗಳ ಪದದಿಂದ ಪುರಾಣವನ್ನು ಪ್ರಾರಂಭಿಸಬೇಕೆಂಬ ಅರಿವನ್ನುಂಟು ಮಾಡಿಕೊಂಡಬೇಕೆಂದು ನಿರ್ಮಲಚಿತ್ತದಿಂದ ಪ್ರಾರ್ಥಿಸಿದನು, ಕೂಡಲೇ 'ಯಾರನ್ನು ಅರಿಯಲು ಇಡೀ ಜಗತ್ತಿಗೆ ಸಾಧ್ಯವಿಲ್ಲವೊ' ಎಂಬರ್ಥದ 'ಉಲಗೆಲಾಂ ಉಣರನ್ದು ಓದಕ್ಕರಿಯವನ್' ಎಂಬ ಆಕಾಶವಾಣಿ ಕೇಳಬಂದಿತು. ಶೇಕ್ಕಿಳಾರ್ ಅದನ್ನೇ ಪ್ರಥಮ ಪಾದವನ್ನಾಗಿ ಮಾಡಿಕೊಂಡು

"ಉಲಗೆಲಾಂ ಉಣರ್‌ನ್ದು ಊದರ್ಕರಿಯವನ್
ನಿಲವುಲಾದಿಯ ನಿರ್ಮಲ ವೈಣಿಯನ್
ಅಲಗಿಲ್ ಸೋದಿಯನ್ ಅಂಬಲತ್ತಾಡುವಾನ್
ಮಲರ್ಸಿಲಂ ಬಠಿವಾಮ್ತಿ ವಣಂಗುವಾಮ್"

ಎಂಬ ವೃತ್ತವನ್ನು ರಚಿಸಿದನು. ಮತ್ತು ಅದನ್ನೇ ಪ್ರಾರ್ಥನ ಪದ್ಯವನ್ನಾಗಿ ಮಾಡಿಕೊಂಡು 'ತಿರುತ್ತೊಂಡರ್ ಪುರಾಣ' ಅಥವಾ 'ಪೆರಿಯಪುರಾಣಮ್' ಮಹಾಕಾವ್ಯವನ್ನು ರಚಿಸಿದನು. 'ವೆಣ್ಬಾ' ಎಂಬ ವೃತ್ತದಲ್ಲಿ ರಚಿತವಾದ ಈ ಪೆರಿಯ ಪುರಾಣಂ ಕಾವ್ಯದಲ್ಲಿ ೬೩ ಪುರಾತನರ ಕಥೆಗಳಿವೆ. ಈ ಕಾವ್ಯವು ಎರಡು ಕಾಂಡ ಳಿಂದಲೂ ಹದಿಮೂರು ಸರ್ಗಗಳಿಂದಲೂ ಕೂಡಿದೆ. ಇದರಲ್ಲಿರುವ ಪದ್ಯಗಳ ಸಂಖ್ಯೆ

೪೨೮೬(ಆದರೆ ಇವುಗಳಲ್ಲಿ ೪೨೫೩ ಮಾತ್ರ ಶೇಕ್ಕಿಳಾರನವೆಂದೂ ಉಳಿದ ೩೩ ವೃತ್ತಗಳು ಪ್ರಕ್ಷಿಪ್ತವೆಂದೂ ತಿಳಿದು ಬಂದಿದೆ).

ಚಿದಂಬರದ ನಟರಾಜನ ಅನುಗ್ರಹದಿಂದ ಪೆರಿಯಪುರಾಣವನ್ನು ಬರೆದು ಮುಗಿಸಿದ ಸಮಯಕ್ಕೆ ಅವನ ಕಾವ್ಯ ರಚನೆಯಲ್ಲಿ ಆಸಕ್ತಿ ತೋರಿದ ಅರಸನು ಅವನನ್ನರಸಿಕೊಂಡು ಚಿದರಂಬರಕ್ಕೆ ಬಂದ. ಅರಸನ ಅಪೇಕ್ಷೆಯ ಮೇರೆಗೆ ಶೇಕ್ಕಿಳಾರನು ತಿಲ್ಲೈನಟರಾಜನ ಪೊನ್ನಾಂಬಲದ ಮಂಟಪದಲ್ಲಿ, ಶೈವ ಮಹಾಸಭೆಯನ್ನುದ್ದೇಶಿಸಿ ತನ್ನ ಕಾವ್ಯವನ್ನು ವಿವರಿಸಿ ಹೇಳಿದ. ಅಲ್ಲಿ ನೆರೆದಿದ್ದ ಜನಸ್ತೋಮ ಅದನ್ನು ಮೈಮರೆತು ಆಲಿಸಿತು. ಅರಸನು ಇದರಿಂದ ಹೆಮ್ಮೆಪಟ್ಟು, ಶೇಕ್ಕಿಳಾರನನ್ನು 'ತೊಂಡರ್‌ಶೀರ್ ಪರವುವಾರ್' ಎಂದರೆ, ಭಕ್ತರ ಮಹಿಮೆಗಳನ್ನು ಪ್ರಸರಿಸುವವನು ಎಂದು ಕರೆದು ಗೌರವಿಸಿದ. ಪ್ರಸಿದ್ಧ ಭಕ್ತನೂ, ವಿರಕ್ತನೂ ಆದ ಶೇಕ್ಕಿಳಾರನನ್ನು ತನ್ನಡಿಯಲ್ಲಿ ಪ್ರಧಾನಿಯಾಗಿಟ್ಟುಕೊಳ್ಳುವುದು ಅವನಿಗೆ ಅಗೌರವ ತೋರಿದಂತೆ ಎಂದು ಅರಸನು ಬಗೆದು ಶೇಕ್ಕಿಳಾರನ ತಮ್ಮ ಬಾಲರಾವಾಯರನ್ನು ತೊಂಡೈಮಾನ್ ಎಂಬ ಪಟ್ಟದೊಡನೆ ತೊಂಡೈಮಂಡಲವನ್ನಾ ಳುವಂತೆ ನೇಮಿಸಿದ. ಶೇಕ್ಕಿಳಾರನು ಚಿದಂಬರದಲ್ಲೆ ಇದ್ದು ವಿರಕ್ತ ಜೀವನವನ್ನು ನಡೆಸುತ್ತ ಕೊತ್ತಪೆರುಮಾನನನ್ನು(ನಟರಾಜ) ಸೇವೆಮಾಡುತ್ತ ಶೈವಭಕ್ತರ ಕಥೆಗಳನ್ನು ಶೈವ ತತ್ವಗಳನ್ನು ಜನರಲ್ಲಿ ಪ್ರಸಾರ ಮಾಡುತ್ತ ಕೆಲಕಾಲ ವಿದ್ದು ನಂತರ ಮುಕ್ತಿ ಪಡೆದ.

ಶೇಕ್ಕಿಳಾರನು ತಮಿಳಿನಲ್ಲಿ ಪ್ರಖ್ಯಾತ ಕವಿ. ಪುರಾತನರ ಮಾಲಿಕೆಯಲ್ಲಿ ಆತನನ್ನೂ ಸೇರಿಸಿ, ೬೩ರ ಸಂಖ್ಯೆಯನ್ನು ೬೪ಕ್ಕೇರಿಸಿ ತಮಿಳುನಾಡಿನ ಜನತೆ ಅವನನ್ನು ಗೌರವಿಸುತ್ತಿದೆ. ಮೈಲಾಪುರದ ಕಾಪಾಲೇಶ್ವರ ದೇವಾಲಯದಲ್ಲಿ ೬೩ ಪುರಾತನರ ವಿಗ್ರಹಗಳಿವೆ. ಎಣಿಸಿ ನೋಡಿದರೆ ಅವುಗಳ ಸಂಖ್ಯೆ ೬೪ ಆಗುತ್ತದೆ. ಏಕೆಂದರೆ ೬೪ನೆಯ ವಿಗ್ರಹ ಶೇಕ್ಕಿಳಾರ್ ಕವಿಯದು. ಅಷ್ಟು ಗೌರವವನ್ನು ತಮಿಳು ಸಾಹಿತ್ಯದ ಆರಾಧಕರು, ಶೈವಭಕ್ತರು ಶೇಕ್ಕಿಳಾರ್ ಕವಿಗೆ ಕೊಟ್ಟಿದ್ದಾರೆ.

# ಅರುವತ್ತು ಮೂರು ಪುರಾತನರ ಸಂಕ್ಷಿಪ್ತ ಪರಿಚಯದ ಪಟ್ಟಿ

| ಸಂಖ್ಯೆ | ಹೆಸರು | ಕಾಲ | ಊರು | ನಾಡು | ಕುಲ |
|---|---|---|---|---|---|
| ೧. | ಅದಿಬತ್ತನಾಯನಾರ್ | ೬೬೦-೮೪೦ | ನಾಗಪಟ್ಟಣ | ಚೋಳ | ನುಳಯಿರ್ (ಬೆಸ್ತ) |
| ೨. | ಅಪ್ಪೂದಿ ಅದಿಗಳ್ | ೬೦೦-೬೬೦ | ತಿಂಗಳೂರ್ | ಚೋಳ | ಅಂದಣರ್ (ಬ್ರಾಹ್ಮಣ) |
| ೩. | ಅಮರನೀತಿಯಾರ್ | ೪೦೦-೬೦೦ | ಪಟ್ಟೈಚೋಳಯಿಷೈ | ವಣಿಗರ್ | ಜಂಗಮ (ವ್ಯಾಪಾರಿ) |
| ೪. | ಅರಿವಾಳ್ತಾಯರ್ | ೪೦೦-೬೦೦ | ಕಣಮಂಗಲಂ | ಚೋಳ | ವೇಳಾಳರ್ |
| ೫. | ಅನಾಯನಾಯನಾರ್ | ೬೬೦-೮೪೦ | ಮಂಗಳವೂರ್ | ಮಲೆನಾಡು | ಇಡೆಯರ್ (ಗೋಪಾಲಕ) |
| ೬. | ಇಸೈ ಜ್ಞಾನಿಯರ್ | ೮೪೦-೮೬೫ | ತಿರುನಾವಲೂರ್ | ನುಡುನಾಡು | ಆದಿಶೈವ |
| ೭. | ಇಡಂಗಟಿನಾಯನಾರ್ | ೬೦೦-೮೪೦ | ಕುಡುಂಬಾಳೂರ್ | ಕೋನಾಡ್ | ಅರಸರ್ |
| ೮. | ಇಯರ ಪಗೆಯಾರ್ | ೬೬೦-೮೪೦ | ಕಾವೇರಿಪೊಂಪತ್ತಿನಂ | ಚೋಳ | ವಣಿಗರ್ |
| ೯. | ಇಳೈಯಾನ್ ಕುಡಿಮಾರ | ೬೬೦-೮೪೦ | ಇಳಯಾನ್‌ಕುಡಿ | ಚೋಳ | ವಣಿಗರ್ ನಾಯನಾರ್ |
| ೧೦. | ರುದ್ರ ಪಶುಪತಿ | ೬೬೦-೮೪೦ | ತಿರುತ್ತಲೆಯೂರ್ | ಚೋಳ | ಅಟಿದಣರ್ |
| ೧೧. | ಎರಿಪತ್ತ ನಾಯನಾರ್ | ೫೫೦-೫೭೫ | ಕರುವೂರ್ | ಚೋಳ | ಅಟಿದಣರ್ |
| ೧೨. | ಎಯ್ಯರ್ ಕೋನ್ | ೮೪೦-೮೬೫ | ತಿರುಪ್ಪೆರುಮಂಗಲಂ | ಚೋಳ | ವೇಳಾಳರ್ ಕಲಿಕ್ಕಾಮರ್ |
| ೧೩. | ಏನಾದಿನಾಥ ನಾಯನಾರ್ | ೬೬೦-೮೪೦ | ಏಯಿನನೂರ್ | ಚೋಳ | ಚಾನ್ರಾರ್ (ಹೆಂಡ ಕಟ್ಟುವವ) |
| ೧೪. | ಐಯಡಿಗಳ್ ರಾಡವರ್ | ೫೫೦-೫೭೩ | ಕಾಂಚೀಪುರಂ, | ತೊಂಡೈನಾಡು ಪಲ್ಲವ | ಕೋನ್ ನಾಯನಾರ್ ಅರಸರ್ |
| ೧೫. | ಕಣನಾದರ್ | ೬೦೦-೬೬೦ | ಸೀಕಾಟ್ | ಚೋಳ | ಅಟಿದಣರ್ |
| ೧೬. | ಕಣಂಪುಲ್ಲ ನಾಯನಾರ್ | ೪೦೦-೬೦೦ | ಇರುಕ್ಕುವೇಳೂರ್ | ಚೋಳ | |
| ೧೭. | ಕಣ್ಣಪ್ಪರ್ | ೪೦೦-೬೦೦ | ಉಡುಪ್ಪೂರ್ | ತೊಂಡೈನಾಡು | ಬೇಡರು |
| ೧೮. | ಕಲಿಕ್ಕಂಬ ನಾಯನಾರ್ | ೬೬೦-೮೪೦ | ತಿರುಪ್ಪೆಣ್ಣಾಡಕಂ | ನಡುನಾಡು | ವಣಿಗರ್ |
| ೧೯. | ಕಲಿಯಿವ ನಾಯನಾರ್ | ೬೬೦-೮೪೦ | ತಿರುವಟ್ರಿಯೂರ್ | ತೊಂಡೈನಾಡು | ಶೆಕ್ಕಾರ (ಗಾಣಿಗ) |
| ೨೦. | ಕಟಿರ್‌ಜಂಗನಾಯನಾರ್ | ೮೪೦-೮೬೨ | ಕೊಡುಂಗೂಳೂರ್ | ಮಲೆನಾಡು | ಅರಸರ್ (ಕೇರಳ) |
| ೨೧. | ಕಾರಿ ನಾಯನಾರ್ | ೬೬೦-೮೪೦ | ತಿರುಕ್ಕಾಡವೂರ್ | ಚೋಳ | ಅಂದಣರ್ |
| ೨೨. | ಕಾರೈಕ್ಕಾಲ್ಲ್ ಅಮ್ಮೈಯಾರ್ | ೫೦೦-೬೦೦ | ಕಾರೈಕ್ಕಾಲ್ | ಚೋಳ | ವಣಿಗರ್ |
| ೨೩. | ಕುಂಗಿಲಿಯಕ್ಕಲಿಯ | ೬೦೦-೬೬೦ | ತಿರುಕ್ಕಾಡವೂರ್ | ಚೋಳ | ಅಂದಣರ್ ನಾಯನಾರ್ |
| ೨೪. | ಕುಲಚ್ಚಿರೈಯಾರ್ | ೬೦೦-೬೬೦ | ಮಣಮೇಕ್ಕುಡಿ | ಪಾಂಡ್ಯ | ಕ್ಷತ್ರಿಯ |
| ೨೫. | ಕುಜ್ಜುವ ನಾಯನಾರ್ | ಸು.೪೫೦ | ಕಳಂದೈ | ಪಾಂಡ್ಯ | ಅರಸರ್ |
| ೨೬. | ಕೋಚ್ಚೆಂಗಣ ಚೋಟಿರ್ | ಸು.೪೫೦ | ತಂಜಾವೂರ್ | ಚೋಳ | ಅರಸರ್ |
| ೨೭. | ಕೋಟ್ಟುಲಿ ನಾಯನಾರ್ | ೮೪೦-೮೬೫ | ನಾಟ್ಟಿಯತ್ತಾನ್‌ಕುಡಿ | ಚೋಳ | ವೇಳಾಳರ್ |
| ೨೮. | ಶೆಡೈಯ್ಯ ನಾಯನಾರ್ | ೮೪೦-೮೬೫ | ತಿರುನಾವಲೂರ್ | ನಡುನಾಡು | ಆದಿಶೈವ |
| ೨೯. | ಚಂಡೇಶ್ವರರ್ | ೪೦೦-೬೦೦ | ತಿರುಚ್ಚೇಯಿಲೂರ್ | ಚೋಳ | ಅಟಿದಣರ್ |
| ೩೦. | ಸತ್ತಿ ನಾಯನಾರ್ | ೬೦೦-೮೪೦ | ವಿರಿಂಜಿಯೂರ್ | ಚೋಳ | ವೇಳಾಳರ್ |

| | | | | | |
|---|---|---|---|---|---|
| ೩೧. | ಶಾಕ್ಕಿಯ ನಾಯನಾರ್ | ೪೦೦-೬೦೦ | ತಿರುಚ್ಚೆಂಗಮಂಗೈ | ಚೋಳ | ವೇಳಾಳರ್ |
| ೩೨. | ಶಿರಪ್ಪುಲಿ ನಾಯನಾರ್ | ೬೬೦-೭೪೦ | ತಿರುವಾಕ್ಕೂರ್ | ಚೋಳ | ಅಟಿದಣರ್ |
| ೩೩. | ಶಿರುತ್ತೊಂಡರ್ | ಸು.೬೪೨ | ಘರುಚ್ಚೆಂಗಾಟ್ಟಂಗುಡಿ | ಚೋಳ | ಮಾಮತ್ತಿರರ್ (ಬ್ರಾಹ್ಮಣರು) |
| ೩೪. | ಸುಂದರಮೂರ್ತಿ | ೭೪೦-೭೬೫ | ತಿರುನಾವಲೂರ್ | ಚೋಳ | ಆದಿಶೈವ |
| ೩೫. | ಶೆರುತ್ತುಣೈಯಾರ್ | ೭೪೦-೭೬೫ | ತಂಜಾವೂರ್ | ಚೋಳರ್ | ವೇಳಾಳರ್ |
| ೩೬. | ಶೇರಮಾನ್ ಪೆರುಮಾಳ್ | ೭೪೦-೭೬೫ | ಕೊಡಂಗೂಳೂರ್ | ಚೇರನಾಡು | ಅರಸು |
| ೩೭. | ಸೋಮಾಸಿಮಾರರ್ | ೭೪೦-೭೬೫ | ತಿರುವೆಂಬಾರ್ | ಚೋಳ | ಬ್ರಾಹ್ಮಣ |
| ೩೮. | ತಂಡಿಯಡಿಗಳ್ | ೪೦೦-೬೦೦ | ತಿರುವಾರೂರ್ | ಚೋಳ | ಬ್ರಾಹ್ಮಣ |
| ೩೯. | ತಿರುಕ್ಕುರಿಪ್ಪುತೊಂಡರ್ | ೬೬೦-೭೪೦ | ಕಾಂಚೀಪುರ | ರತೊಂ ಡೈನಾಡು | ಏಕಾಲಿಯರ್ (ಅಗಸ) |
| ೪೦. | ತಿರುಜ್ಞಾನ ಸಂಬಂಧರ್ | ೬೦೦-೬೬೦ | ಸೀಕಾಚಿ | ಚೋಳ | ಬ್ರಾಹ್ಮಣ |
| ೪೧. | ತಿರುನಾವುಕ್ಕರಸರ್ | ೬೦೯-೬೬೦ | ತಿರುವಾಮೂರು | ನಡುನಾಡು | ವೇಳಾಳರ್ |
| ೪೨. | ತಿರುನಾಳೈ ಪೋವರ್ | ೬೦೦-೬೬೦ | ಅಸನೂರ್ | ಚೋಳ | ಹರಿಜನ (ನಂದನಾರ್) |
| ೪೩. | ತಿರುನೀಲಕಂಠರ್ | ೬೦೦-೬೬೦ | ಚಿದಂಬರ | ಚೋಳ | ಕುಂಬಾರ |
| ೪೪. | ತಿರುನೀಲಕಂಠ್ ಯಾಳ್ಪ್ಪಾಣರ್ | ೬೦೦-೬೬೦ | ಎರುಕ್ಕ ತಂಬುಲಯೂರ್ | ನಡುನಾಡು | ಪಾಣರ್ (ಹಾಡುಗಾರ) |
| ೪೫. | ತಿರುನೀಲನಕ್ಕನಾಯನಾರ್ | | ತಿರುಚ್ಚಾತ್ತಮಂಗೈ | ಚೋಳ | ಬ್ರಾಹ್ಮಣ |
| ೪೬. | ತಿರುಮೂಲರ್ | ಸು.೬೦೦ | ಸಾತ್ತನೂರ್ | ಚೋಳ | ಗೋಪಾಲಕ |
| ೪೭ | ನಮಿನಂದಿ ಅಡಿಗಳ್ | ೪೦೦-೬೦೦ | ಏಮಪ್ಪೇರೂರ್ | ಚೋಳ | ಬ್ರಾಹ್ಮಣ |
| ೪೮. | ನರಸಿಂಗ ಮುನೈಯಾರ್ | ೭೪೦-೭೬೫ | ತಿರುನಾವಲೂರ್ | ನಡುನಾಡು | ಅರಸು |
| ೪೯. | ನೆಡುಮಾರ ನಾಯನಾರ್ | ೬೦೦-೬೬೦ | ಮಧುರೆ | ಪಾಂಡ್ಯ | ಅರಸು |
| ೫೦. | ನೇಶ ನಾಯನಾರ್ | ೬೬೦-೭೪೦ | ಕಂಬೀಲ್ | ಪಾಂಡ್ಯ | ದೇವಾಂಗ |
| ೫೧. | ಪುಗಳ್ ಚೋಳರ್ | ಸು.೫೫೦ | ಉರೈಯೂರ್ | ಚೋಳ | ಅರಸು |
| ೫೨. | ಪುಗಳ್ತುಣೈ ನಾಯನಾರ್ | ೪೦೦-೬೦೦ | ಶರುವಿಲಿ ಪುತ್ತೂರ್ | ಚೋಳ | ಆದಿಶೈವ |
| ೫೩. | ಪೂಸಲಾರ್ ನಾಯನಾರ್ | ೬೭೫-೭೨೦ | ತಿರುನಿನ್ರವೂರ್ | ತೊಂಡೈನಾಡು | ಬ್ರಾಹ್ಮಣ |
| ೫೪. | ಪೆರುಮಿಳಲೈಕ್ಕುರುಂಬರ್ | ೭೪೦-೭೬೫ | ಪೆರುಮಿಳಲೈ | ತೊಂಡೈನಾಡು | ಬ್ರಾಹ್ಮಣ |
| ೫೫. | ಮುಂಗೈಯರಕ್ಕರಸಿಯಾರ್ | ೬೦೦-೬೬೦ | ಮಧುರೈ | ಪಾಂಡ್ಯ | ಅರಸಿ |
| ೫೬. | ಮಾನಕ್ಕಂಜಾರರ್ | ೭೪೦-೭೬೫ | ಕಂಜಾಲೂರ್ | ಪಾಂಡ್ಯ | ವೇಳಾಳರ್ |
| ೫೭ | ಮುರುಗ ನಾಯನಾರ್ | ೬೦೦-೬೬೦ | ತಿರುಪ್ಪುಗಲೂರ್ | ಚೋಳ | ಬ್ರಾಹ್ಮಣ |
| ೫೮. | ಮುನೈಯಿಡುವರ್ | ೬೬೦-೭೪೦ | ತಿರುನೀಡೂರ್ | ಚೋಳ | ವೇಳಾಳರ್ |
| ೫೯. | ಮೂರ್ಖನಾಯನಾರ್ | ೬೬೦-೭೪೦ | ತಿರುವೇರ್ಕಾಡು | ತೊಂಡೈನಾಡು | ವೇಳಾಳರ್ |
| ೬೦. | ಮೂರ್ತಿನಾಯನಾರ್ | ಸು.೫೫೦ | ಮಧುರೈ | ಪಾಂಡ್ಯ | ವಣಿಗ (ವೈಶ್ಯ) |
| ೬೧. | ಮೆಯ್ ಪೋರುಳ್ | ೬೬೦-೭೪೦ | ರುಕ್ಕೋವಲೂರ್‌ಶಿ | ನಡುನಾಡು | ಅರಸ ನಾಯನಾರ್ |
| ೬೨. | ವಾಯಿಲ್ಲಾರದ ನಾಯನಾರ್ | ೬೬೦-೭೪೦ | ತಿರುಮೈಲಾಪೂರ | ತೊಂಡೈನಾಡು | ವೇಳಾಳರ್ |
| ೬೩. | ವಿರಲ್‌ಮಿಂಡ ನಾಯನಾರ್ | ೭೪೦-೭೬೫ | ಚಂಗುನ್ನೂರ್ | ಮಲೈನಾಡು | ವೇಳಾಳರ್ |

# ಅಧ್ಯಾಯ – ೩

## ಕಥಾವಸ್ತು

### ೩) ಹರಿಹರನ ರಗಳೆಗಳ ಕಥಾವಸ್ತು :

ಕನ್ನಡ ಸಾಹಿತ್ಯದಲ್ಲಿ 'ಚಂಪೂ' ಮತ್ತು 'ವಚನ' ಎಂಬ ಎರಡು ಸಶಕ್ತ ಸಾಹಿತ್ಯ ಪರಂಪರೆಗಳು ಮೂಡಿ ಪ್ರಭಾವ ಬೀರಿದ್ದ ತರುವಾಯ ಹುಟ್ಟಿಕೊಂಡದ್ದು ಹರಿಹರನ ಸಾಹಿತ್ಯ ಪ್ರಕಾರ. ವಚನ ಪರಂಪರೆಯಾದ ಮೇಲೆ ಹರಿಹರನ ಸಾಹಿತ್ಯ ಪರಂಪರೆ ಹರಳುಗಟ್ಟಿದ್ದು ಒಂದು ಅದ್ಭುತ. "ಒಂದು ಸಶಕ್ತವಾದ ಸಾಹಿತ್ಯ ಸಂಸ್ಕೃತಿ ಪರಂಪರೆ ಬಂದಾದ ಮೇಲೆ ಅದೇ ಭಾಷೆಯಲ್ಲಿ ಮತ್ತೊಂದು ಶಕ್ತ ಪರಂಪರೆ ಮೂಡಿ ಬರುವುದು ಆ ಭಾಷೆ ದೇಶಗಳ ಭಾಗ್ಯವೆನ್ನಬೇಕು".[೧] ಹರಿಹರನ ಸಾಹಿತ್ಯ ಪರಂಪರೆ ಚಂಪು ಮತ್ತು ವಚನ ಎಂಬ ಎರಡು ಸಾಹಿತ್ಯ ಪರಂಪರೆಗಳಿಗಿಂತಲೂ ಭಿನ್ನವಾದದ್ದು. ವಸ್ತು, ಭಾಷೆಗಳ ವಿಚಾರದಲ್ಲಿ ಅದು ಹಿಂದಿನ ಸಾಹಿತ್ಯ ಪ್ರಕಾರಗಳಿಗಿಂತ ತನ್ನದೇ ಆದ ವೈಶಿಷ್ಟ್ಯತೆಯಿಂದ ಕೂಡಿದೆ.

"ಹರಿಹರ ಪೂರ್ವ ಕನ್ನಡ ಸಾಹಿತ್ಯವು ಯಾವುದೋ ಒಂದು ತೆರೆನ ಪರಂಪರಾನುಗತ ಜಾಡಿನಲ್ಲೇ ಸಾಗಿತ್ತು. ಪ್ರೌಢವಾದ ಚಂಪೂ ಶೈಲಿಯಲ್ಲಿ ರಚಿತವಾದ ಅಂದಿನ ಕಾವ್ಯಗಳು ಸಂಸ್ಕೃತ ಭೂಯಿಷ್ಠವಾಗಿದ್ದು, ರಾಜರ ಆಸ್ಥಾನಕ್ಕೂ ಪಂಡಿತ ಮಂಡಲಿಗೂ ಮೀಸಲಾಗಿದ್ದುವು. ವಚನಕಾರರನ್ನುಳಿದು ಇತರ ಬಹುಮಟ್ಟಿನ ಕವಿಗಳು, ತಮ್ಮ ಆಶ್ರಯದಾತರನ್ನೇ ಗಮನದಲ್ಲಿರಿಸಿಕೊಂಡು ಅವರ ಮೆಚ್ಚುಗೆಗಾಗಿ ಕೃತಿಗಳನ್ನು ಬರೆದಿರುವುದು ಕಂಡುಬರುತ್ತದೆ. ತಮ್ಮ ಪಾಂಡಿತ್ಯ ಪ್ರದರ್ಶನಕ್ಕಾಗಿಯೋ ಲೌಕಿಕ ಲಾಭದ ಆಸೆಗಾಗಿಯೋ ರಚಿತವಾದ ಅಂದಿನ ಕಾವ್ಯಗಳು ಜನಸಾಮಾನ್ಯರ ನಿಲುವಿಗೆ ಎಟುಕುವಂತಿರಲಿಲ್ಲ. ಈ ಸಂಪ್ರದಾಯದ ಕಟ್ಟನ್ನು ಮುರಿದು ನೂತನ ಮಾರ್ಗವನ್ನು ತೋರಿದವನು ಹರಿಹರ".[೨]

ಕಾವ್ಯ ವಸ್ತುವಿನ ಆಯ್ಕೆಯಲ್ಲಿ ವೈಶಿಷ್ಟ್ಯವನ್ನು ಮೆರೆದವನು ಹರಿಹರ. ಅಷ್ಟೇಅಲ್ಲ ಸ್ವತಂತ್ರ ಮನೋವೃತ್ತಿಯವನು. ಯಾರ ಹಂಗಿಗೂ ಒಳಗಾದವನಲ್ಲ. ಯಾರಿಗೂ ಅಂಜಿದವನಲ್ಲ. ನಿರ್ದಾಕ್ಷಿಣ್ಯ ಪ್ರವೃತ್ತಿ ಅವನದು. ಬಾಳಿನಲ್ಲಿ ಹೇಗೋ ಕಾವ್ಯದಲ್ಲಿಯೂ ಹಾಗೆಯೇ. ಹಾಗಾಗಿ ತನ್ನ ಹಿಂದಿನ ಕಾವ್ಯ ಪರಂಪರೆಯನ್ನು ಕಟುವಾಗಿ ಟೀಕಿಸಿದ. ಕಾವ್ಯವಸ್ತುವನ್ನು ಕುರಿತಂತೆ –

ಮನುಜರ ಮೇಲೆ ಸಾವವರ ಮೇಲೆ, ಕನಿಷ್ಠರ ಮೇಲೆಯಕ್ಕಟಾ
ತನತನಗಿಂದ್ರ ಚಂದ್ರ ರವಿ ಕರ್ಣ ದಧೀಚಿಪ ಬಲೀಂದ್ರನೆಂದು ಮೇಣ್

---

೧. ಜಿ. ಎಸ್. ಸಿದ್ಧಲಿಂಗಯ್ಯ, ರಗಳೆಯ ವೈವಿಧ್ಯತೆ ಮತ್ತು ಹರಿಹರ ಪ್ರತಿಭೆ(ಹರಿಹರನ ರಗಳೆಗಳು– ಸಾಂಸ್ಕೃತಿಕ ಮುಖಾಮುಖಿ), ಪುಟ ೧೦.

೨. ಉದ್ಧೃತ : ಕೋ.ಚನ್ನಬಸಪ್ಪ, ಹರಿಹರನ ಅಷ್ಟಕ, ಶತಕಗಳು, ಪುಟ ೩೭

ಅನವರತಂ ಪೊಗಳ್ದು ಕೆಡಬೇಡಲೆ ಮಾನವ ನೀನಹರ್ನಿಶಂ
ನೆನೆಪೊಗಳರ್ಚಿಸೆಮ್ಮ ಕಡು ಸೊಂಪಿನ ಪೆಂಪಿನ ಹಂಪೆಯಾಳ್ದನಂ”[೩]

ಎಂಬುದು ಧೀರ ಸ್ವತಂತ್ರ ಕವಿಯ ಧೋರಣೆ.

ಅವನ ಈ ಧೀರ ಸ್ವತಂತ್ರ ಪ್ರವೃತ್ತಿಗೆ ಮುಖ್ಯಕಾರಣ ಬಸವಾದಿ ಶರಣರು ಮಾಡಿದ ಧಾರ್ಮಿಕ, ಸಾಮಾಜಿಕ ಕ್ರಾಂತಿ. ಅಂದು ಕರ್ನಾಟಕದಲ್ಲೆಲ್ಲಾ ಎದ್ದ ಕ್ರಾಂತಿಯ ಬಿರುಗಾಳಿಯ ಪ್ರಭಾವ ಕನ್ನಡ ಸಾಹಿತ್ಯದ ಮೇಲೆಯೂ ಆಯಿತು. ರಾಜನ ಬದಲು, ಪುರಾಣದ ವ್ಯಕ್ತಿಗಳಿಗೆ ಬದಲಾಗಿ ಬೇಡನೂ, ಕುಂಬಾರನೂ, ಒಕ್ಕಲಿಗನೂ ಹರಿಹರನ ಕಾವ್ಯಗಳ ನಾಯಕರಾದರು. ಹರಿಹರನ ಕೈಯಲ್ಲಿ ಕಾವ್ಯದ ವಸ್ತು ಬದಲಾಯಿತು. ಇದುವರೆವಿಗೂ ನಮ್ಮ ಕವಿಗಳು ರಾಮಾಯಣ, ಮಹಾಭಾರತಗಳಿಂದ ಕಾವ್ಯಕ್ಕೆ ವಸ್ತುವನ್ನು ಆಯ್ಕೆ ಮಾಡಿಕೊಳ್ಳುತ್ತಿದ್ದರು. ಹರಿಹರ ಇದಕ್ಕೆ ತಿಲಾಂಜಲಿಯಿತ್ತು ಸಾಮಾನ್ಯರ ಬದುಕು ಮತ್ತು ಬವಣೆಯನ್ನೆ ಕಥಾವಸ್ತುವನ್ನಾಗಿ ಚಿತ್ರಿಸತೊಡಗಿದ. “ಪ್ರತಿಷ್ಠಿತರ, ಬಲವಂತರ ಚಿತ್ರಣಗಳೇ ಮಹಾಕಾವ್ಯವೆನಿಸುತ್ತಿದ್ದ ಕಾಲದಲ್ಲಿ ಕವಿಯೊಬ್ಬ ತೀರಾ ಭಿನ್ನನೆಲೆಗೆ, ವಿರುದ್ಧ ದಿಕ್ಕಿಗೆ ಚಲಿಸಿದ್ದು ಅಪೂರ್ವವೆನ್ನಬೇಕು”.[೪] ಲೌಕಿಕ, ಅಲೌಕಿಕಗಳ ಮಾರ್ಗಗಳನ್ನು ಬಿಟ್ಟುಕೊಟ್ಟು, ಪ್ರೌಢವಾದ ಛಂದೋರೂಪಗಳನ್ನು ದಾಟಿ ಬಂದು, ಪೂರ್ಣ ಪ್ರಮಾಣದಲ್ಲಿ ರಗಳೆಯ ಮಾಧ್ಯಮದಲ್ಲಿ ಅಭಿವ್ಯಕ್ತಿಸತೊಡಗಿದ.

ಹರಿಹರ ಶಿವನ ಪರಮ ಆರಾಧಕ. ಸ್ವಭಾವತಃ ಭಾವುಕನೂ ಹಾಗೂ ಶ್ರೇಷ್ಠಭಕ್ತನ ಅಂತಃಕರಣವನ್ನು ಹೊಂದಿದವನು. ಇಂತಹ ಹರಿಹರ ಶಿವನ ನಿಷ್ಠಾವಂತ ಭಕ್ತರ ಜೀವನ ಕಥೆಯನ್ನು ತನ್ನ ರಗಳೆಗಳಿಗೆ ವಸ್ತುವಾಗಿ ಆರಿಕೊಂಡುದ್ದು ಸಹಜ. ಸೋದರನಾಡಾದ ತಮಿಳುನಾಡಿನಲ್ಲಿ ಪ್ರಖ್ಯಾತರಾಗಿದ್ದು, ಕರ್ನಾಟಕದ ಹನ್ನೆರಡನೆಯ ಶತಮಾನದ ಶರಣರ ಮೇಲೆ ತಮ್ಮ ಗಾಢ ಪ್ರಭಾವವನ್ನು ಬೀರಿದ್ದ ಅರುವತ್ತುಮೂವರು ಪುರಾತನರ ಚರಿತ್ರೆಯೆ ಹರಿಹರನ ರಗಳೆಗಳಿಗೆ ವಸ್ತುವಾಯಿತು. ಈ ಪುರಾತನರ ಕಥೆಗಳನ್ನು ಹರಿಹರ ಕನ್ನಡಿಗರಿಗೂ ಮನಮುಟ್ಟುವಂತೆ ಬಣ್ಣಿಸಿದ್ದಾನೆ. ಶಿವಶರಣರ ಗೌರವಕ್ಕೆ ಪಾತ್ರರಾದ ಈ ಪುರಾತನರು, ಹರಿಹರನಿಗೂ ಪೂಜ್ಯರೇ. ಶಿವಶರಣರು ಇವರಲ್ಲಿ ಕೆಲವರ ಹೆಸರುಗಳನ್ನು ತಮ್ಮ ವಚನಗಳಲ್ಲಿ ಹೇಳಿರುವುದು, ಅವರ ಮಹಿಮೆಗಳನ್ನು ಕೊಂಡಾಡಿರುವುದನ್ನು ಗಮನಿಸಿದರೆ ಇವರ ಕಥೆಗಳು, ಹರಿಹರನಿಗಿಂತ ಮುಂಚೆಯೇ ಕನ್ನಡನಾಡಿನಲ್ಲಿ ಪ್ರಚಾರದಲ್ಲಿದ್ದವು.

ಹರಿಹರನ ರಗಳೆಗಳೆಲ್ಲವೂ ಶಿವಭಕ್ತರ ಕಥಾ ನಿರೂಪಣೆಗೆ ಮೀಸಲಾದವು. ಪ್ರತಿಯೊಂದು ಕಥೆಯಲ್ಲಿಯೂ ಭಕ್ತನ ದೇಶವರ್ಣನೆ, ಅವನ ಕಾಯಕ, ಶಿವರಾಧನೆ, ಶಿವನಪರೀಕ್ಷೆ ಪರೀಕ್ಷೆಯಲ್ಲಿ ತೇರ್ಗಡೆ, ಶಿವನೊಂದಿಗೆ ಕೈಲಾಸಕ್ಕೆ ಪ್ರಯಾಣ – ಇವು ಕಡ್ಡಾಯವಾಗಿ ಬರುತ್ತವೆ. ಈ ರೀತಿ ರಗಳೆಗಳ ಕಥಾಹಂದರ

೩. ಶಿ. ಶಿ. ಬಸವನಾಳ : (ಸಂ.) ರಕ್ಷಾಶತಕ ಮತ್ತು ಪಂಪಾಶತಕ, ಪುಟ ೩೨, ಪದ್ಯ ೮೨.
೪. ಗುರುಪಾದ ಮರಿಗುದ್ದಿ, ಹರಿಹನ ರಗಳೆಗಳು – ಸಾಂಸ್ಕೃತಿಕ ಮುಖಾಮುಖಿ, ಪುಟ ೧೧೦.

ನಿರ್ಮಾಣಗೊಂಡಿರುತ್ತದೆ. ಕಥೆಯ ಬೆಳವಣಿಗೆಯ ರೀತಿ ಒಂದೇ ತೆರನಾಗಿರುವುದರಿಂದ ಓದುಗ ಏಕತಾನತೆಯಿಂದ ಬೇಸರಗೊಳ್ಳುವುದು ಸಹಜ. ಆದರೆ ಕಥಾನಾಯಕರಾದ ಭಕ್ತರ ಕಾಯಕರುಗಳು, ಅವರಿಗೆ ಶಿವ ಒಡ್ಡುವ ಸಂಕಷ್ಟಗಳು, ಅವರ ನಡೆ-ನುಡಿಗಳು ಒಂದರಂತೆ ಇನ್ನೊಂದಿರುವುದಿಲ್ಲ. ಹರಿಹರನ ಸಹಜ ಪ್ರತಿಭೆಯಿಂದ ರಗಳೆಗಳ ಕಥೆಗಳು ರಾಜನೀಚುವಾಗಿವೆ. ಓದುಗನಿಗೆ ಸಹಜವಾಗಿ ಆಸಕ್ತಿ, ಸಹಾನುಭೂತಿಗಳು ಹುಟ್ಟುತ್ತವೆ. “ಮೂಲ ಕಥೆಯ ಲೋಹವನ್ನು ತನ್ನ ಕಲ್ಪನೆಯ ಸ್ಪರ್ಶದಿಂದ ಸುವರ್ಣವಾಗಿಸಿ ಕಾವ್ಯಾತ್ಮಚರಿತೆಗಳ (Poctic biography) ರಾಶಿಯನ್ನೇ ಅವನು ಕನ್ನಡಕ್ಕೆ ನೀಡಿದ್ದಾನೆ!”[೫]

ಓಲಗದ ಸೊತ್ತಾಗಿದ್ದ ಸಾಹಿತ್ಯವನ್ನು ಜನಸಾಮಾನ್ಯರ ಸಂಪತ್ತೆಂದು ಹರಿಹರ ಸಾರಿ ಸಾರಿ ಹೇಳಿದನು. ಹರಿಹರ ಜನಸಾಮಾನ್ಯರ ಇತಿವೃತ್ತಗಳನ್ನೆ ಇದೇ ಮೊದಲ ಸಲ ಕಾವ್ಯದ ವಸ್ತುಗಳನ್ನಾಗಿಸಿಕೊಂಡ. ರಾಜಾಸ್ಥಾನದಲ್ಲಿ ಘನತೆ, ಗಾಂಭೀರ್ಯ ಪ್ರೌಢಿಮೆ, ಪ್ರತಿಷ್ಠೆಗಳಿಂದ ಮೆರೆದ ಕನ್ನಡ ಸಾಹಿತ್ಯದ ದಿಕ್ಕು ದೆಸೆ ಹರಿಹರನಿಂದ ಬದಲಾಯಿತು. “ಸಾಮಾಜಿಕವಾಗಿ ಸಾಮಾನ್ಯರಾದವರು ಕಾವ್ಯಕ್ಕೆ ವಸ್ತುವಾದದ್ದು ಮತ್ತು ನಾಯಕರಾದದ್ದು ಇಡೀ ಕನ್ನಡ ಸಾಹಿತ್ಯದಲ್ಲಿಯೇ ಇದು ಮೊದಲ ಸಲ. ಆದರೆ, ಹರಿಹರ ಚಿತ್ರಿಸುವ ಪ್ರಕಾರ ಅವರೆಲ್ಲ ಅಪ್ರತಿಮ ಶಿವಭಕ್ತರು; ಶಿವನನ್ನೊಲಿಸಿ ನೇರವಾಗಿ ಗಣಪದವಿಗೇರಿದವರು. ಈ ದೃಷ್ಟಿಯಿಂದ ಇವರು ಅಸಮಾನ್ಯರೇ ಆಗುತ್ತಾರೆ. ಈ ಸಾಮಾನ್ಯರ ‘ಅಸಮಾನ್ಯತೆ’ ಸಾಮಾಜಿಕವಾಗಿ ಸ್ಥಾಇತವಾಗುವುದಿಲ್ಲ, ಶಿವಶರಣರೆಂಬ ಕಾರಣದಿಂದ ಸ್ಥಾಪಿತವಾಗುತ್ತದೆ ಎಂದರೆ ಮೂಲತಃ ಇಲ್ಲೂ ‘ಅಸಮಾನ್ಯರೇ’ ಕಾವ್ಯದ ವಸ್ತುವಾದಂತಾಯಿತು. ಈ ಒಂದು ಪರಿಮಿತಿಯನ್ನು ಮರೆತರೆ ಕಾವ್ಯ ವಸ್ತುವಿನಲ್ಲಿ ಹರಿಹರ ತಂದ ಬದಲಾವಣೆ ಅಸಾಧಾರಣವಾದದ್ದು.”[೬]

ಹರಿಹರ; ಸಂಸ್ಕೃತ ಕಾವ್ಯ ಪರಂಪರೆಯ ಋಣದಲ್ಲಿದ್ದು ಪ್ರತಿಷ್ಠಿತ ಕಾವ್ಯ ವಿಧಾನವೆನಿಸಿಕೊಂಡಿದ್ದ ಚಂಪುವಿಗೆ ಪರ್ಯಾಯವಾಗಿ, ರಗಳೆ ಪ್ರಕಾರವನ್ನು ರೂಪಿಸಿದನು. ಸಾಮಾನ್ಯ ಭಕ್ತರ ಚಾರಿತ್ರ್ಯವನ್ನು ಬಿತ್ತರಿಸಲು ರೂಪುಗೊಂಡ ಹೊಸ ಕಥನ ಪ್ರಕಾರವಾಯಿತು. ಇವೆಲ್ಲ ಕನ್ನಡ ಸಾಹಿತ್ಯದಲ್ಲಿ ಮಹತ್ವದ ಸಂಗತಿಗಳು.

### ಆ) ಶೇಕ್ಕಿಳಾರನ ಪೆರಿಯಪುರಾಣದ ಕಥಾವಸ್ತು :

ಶಿವನ ನಿಷ್ಠಾವಂತ ಭಕ್ತರೂ, ವರ್ಣ-ವರ್ಗ ಈ ಭಾವನೆಗಳಾವುವೂ ಇಲ್ಲದೆ ತಮ್ಮ ಶುದ್ಧ ಅಂತರಂಗದಿಂದ ಶಿವನನ್ನು ಆರಾಧಿಸಿ, ಪ್ರತಿಫಲಾಪೇಕ್ಷೆಯಿಲ್ಲದೆ ಭಕ್ತಿಯ ಅಮೃತವನ್ನು ತಮ್ಮ ನಾಲಿಗೆಯಿಂದ ಹೀರಿ ಸುಖಿಸಿ ತಮ್ಮ ಇಷ್ಟದೈವದ ಕೃಪೆಯನ್ನು ಬಯಸಿದ, ಸಕಲ ಜೀವಾತ್ಮರಿಗೆ ಒಳಿತನ್ನು ಬಯಸಿದ ಸಾತ್ವಿಕ ಮನಸ್ಸಿನ ಅರುವತ್ತುಮೂರು ಪುರಾತನರ ಚರಿತ್ರೆಯೇ ಪೆರಿಯಪುರಾಣದ ಕಥಾವಸ್ತು.

೫. ರಂ. ಶ್ರೀ. ಮುಗಳಿ, ಕನ್ನಡ ಸಾಹಿತ್ಯ ಚರಿತ್ರೆ, ಪುಟ ೧೪೫.
೬ ಜಿ. ಎಸ್. ಶಿವರುದ್ರಪ್ಪ, ಸಾಹಿತ್ಯ ಸಮೀಕ್ಷೆ. (ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ) ಪುಟ ೯೭

ಪುರಾತನರು ಎಂದು ಕರೆಸಿಕೊಳ್ಳುವ ಅರುವತ್ತು ಮೂವರು ಶಿವಭಕ್ತರು ತಮಿಳುನಾಡಿನಲ್ಲಿ ಕ್ರಿ.ಶ. ನಾಲ್ಕನೇ ಶತಮಾನದಿಂದ ಒಂಬತ್ತನೇ ಶತಮಾನದವರೆಗೆ ಆರುನೂರು ವರ್ಷಗಳ ಅವಧಿಯಲ್ಲಿ ವಿವಿಧ ಕಾಲಘಟ್ಟದಲ್ಲಿ ಬದುಕಿದ್ದವರು. ತಮಿಳುನಾಡಿನಲ್ಲಿ ಇವರನ್ನು 'ತಿರುತ್ತೊಂಡರ್', 'ನಾಯನ್ಮಾರರು', 'ನಾಯನಾರರು' ಎಂದೂ ಕನ್ನಡನಾಡಿನಲ್ಲಿ ಅರವತ್ತುಮೂವರು, ತ್ರಿಷಷ್ಟಿ ಪುರಾತನರು, ಎಂದೂ ಕರೆಯುತ್ತಾರೆ.

ತಮಿಳುನಾಡಿನ ಶೈವಪರಂಪರೆಯಲ್ಲಿ ಅರವತ್ತುಮೂವರು ಪುರಾತನರಿಗೆ ಚಾರಿತ್ರಿಕ ಸ್ಥಾನಮಾನಗಳಿವೆ. ತಮಿಳುನಾಡಿನ ಶೈವ ದೇವಾಲಯಗಳಲ್ಲಿ ಈ ಅರವತ್ತು ಮೂವರ ಮೂರ್ತಿಗಳನ್ನು ಪ್ರತಿಷ್ಠಾಪಿಸಿರುವುದಲ್ಲದೆ, ಅವರಿಗೆ ಪೂಜೆ, ಪುರಸ್ಕಾರಗಳೂ ನಡೆಯುತ್ತವೆ. ಈ ಪುರಾತನರು ತಮಿಳುದೇಶದ ಪ್ರಾಚೀನ ಧರ್ಮಗಳಲ್ಲೊಂದಾದ ಶೈವಮತ ಊರ್ಜಿತಾವಸ್ಥೆಯನ್ನು ಹೊಂದಲು ಪ್ರಮುಖ ಪಾತ್ರ ವಹಿಸಿದವರಾಗಿದ್ದಾರೆ. "ತಮಿಳಿನಾಡಿನಲ್ಲಿ ಅತ್ಯಂತ ವ್ಯಾಪಕವಾದ ಪ್ರಸಾರವನ್ನು ಹೊಂದಿದ್ದ ಧರ್ಮವೆಂದರೆ ಶೈವಧರ್ಮ, ಅದು ದಕ್ಷಿಣ ಭಾರತದ ಜನಜೀವನದಲ್ಲಿ ಹಾಸುಹೊಕ್ಕಾಗಿ ಬೆರೆತು, ಅವರ ಬಾಳನ್ನು ಹಸನುಗೊಳಿಸುತ್ತಾ ಬಂದಿತ್ತು. ಚೋಳ, ಚೇರ, ಪಾಂಡ್ಯರಾಜರುಗಳು ಈ ಧರ್ಮವನ್ನು ಒಪ್ಪಿಕೊಂಡು ಅದರ ಸ್ಥಿತಿಗೆ ಕಾರಣರಾದರು. ಕಾಲ ಉರುಳಿದಂತೆ ತಮಿಳುನಾಡನ್ನು ಪ್ರವೇಶಿಸಿದ ಜೈನ, ಬೌದ್ಧ ಧರ್ಮಗಳು ಶೈವಧರ್ಮವನ್ನು ಮೆಟ್ಟಿನಿಂತು ಜನತೆಯ ಮೇಲೆ ತಮ್ಮ ಪ್ರಭುತ್ವವನ್ನು ಸ್ಥಾಪಿಸಿದವು. ಈ ಪರಧರ್ಮಗಳ ಆಘಾತದಿಂದ ಶಕ್ತಿಕುಂಠಿತಗೊಂಡು ಶೈವಧರ್ಮ ಅವನತಿಯತ್ತ ಮುಖಮಾಡಿದ್ದಾಗ ತಮ್ಮ ವೈಯಕ್ತಿಕ ಶಕ್ತಿ, ಸಾಮರ್ಥ್ಯ, ಪ್ರಭಾವಗಳಿಂದ ಅದರ ಪುನರುತ್ಥಾನ ಮಾಡಿದ ಮಹಾಪುರುಷರೇ ಅರವತ್ತುಮೂರು ಪುರಾತನರೆಂಬ ಶೈವ ಸಂತರು. ಇವರು ಬೌದ್ಧ ಜೈನ ಮತಗಳ ನಿರೀಶ್ವರವಾದವನ್ನು ಬಲವಾಗಿ ಖಂಡಿಸಿ ಕಳೆಗುಂದುತ್ತಿದ್ದ ಶೈವಧರ್ಮವನ್ನು ಬೆಳಗಿ ಜನತೆಯಲ್ಲಿ ಭಗವಂತನ ಬಗ್ಗೆ ಭಕ್ತಿ ಬೇರೂರುವಂತೆ ಮಾಡಿದರು. ಈ ಶೈವ ಪುರಾತನರಲ್ಲಿ ಅಪ್ಪರ್, ಸಂಬಂಧರ್, ಮತ್ತು ಸುಂದರರ್ ಎಂಬುವರು ಮೂವರು ಪುರಾತನ ಶ್ರೇಷ್ಠ ಸಮಯಾಚಾರ್ಯರು. ಈ ಧರ್ಮವು ವೈಷ್ಣವ ಹಾಗೂ ಜೈನ ಮತಗಳ ದಾಳಿಯಲ್ಲಿ ಸಿಕ್ಕಿ ನಾಶವಾಗದಂತೆ ಕಾಪಾಡಿಕೊಂಡು ಬಂದ ಕೀರ್ತಿಸ್ತಂಭಗಳೆಂದು ಪ್ರಸಿದ್ಧರಾಗಿದ್ದಾರೆ. ಇವರು ಹಾಡಿರುವ 'ತೇವಾರ'ಗಳೆಂದು ಪ್ರಸಿದ್ಧವಾಗಿರುವ 'ಪದಿಗ'ಗಳನ್ನು ತಮಿಳುನಾಡಿನ ಶೈವರು ಅನುದಿನವೂ ಭಕ್ತಿಯಿಂದ ಹಾಡುತ್ತಾರೆ. ಕಾಪಾಲಿಕ, ಕಾಳಾಮುಖರಂಥ ಉಗ್ರ ಶೈವಧರ್ಮಿಗಳಿಂದ ಜನಸಂಪರ್ಕವನ್ನು ಕಡಿದುಕೊಂಡು ಸುಡುಗಾಡು ಸೇರಿದ್ದ ಶೈವಧರ್ಮವು, ಮಾನವ ಕಲ್ಯಾಣದ ತಿಳಿವನ್ನು ತಂದುಕೊಂಡು ಮತ್ತೆ ಜನಮನವನ್ನು ಸೂರೆಗೊಳ್ಳುವಂತೆ ಮಾಡಿದ ಶ್ರೇಯಸ್ಸು ತಮಿಳುನಾಡಿನ ಈ ಶೈವಭಕ್ತರಿಗೆ ಸಲ್ಲುತ್ತದೆ. ಧಾರ್ಮಿಕ ಡಂಬಾಚಾರ, ಅನ್ಯಮತಗಳ ಬಾಹ್ಯ ಒತ್ತಡಗಳ ನಡುವೆ ಶಿವಪರವಾದ ಒಲವು-ನಿಲುವುಗಳ ಭಕ್ತಿಭಾವದ ದೀಪವನ್ನು ಆರದಂತೆ ಕಾಪಾಡಿಕೊಂಡು ಬಂದ ಕೀರ್ತಿ ಈ

ಪುರಾತನರದು. ಆದ್ದರಿಂದಲೇ ಬಸವಾದಿ ಶಿವಶರಣರು ಈ ಭಕ್ತರನ್ನು ಪುರಾತನ ಪುರುಷರೆಂದು ಗೌರವಿಸಿದರು. ತಮ್ಮ ಧಾರ್ಮಿಕ, ಸಾಮಾಜಿಕ ಸ್ವರೂಪದ ಚಳುವಳಿಗೆ ಅವರ ಉಪದೇಶಗಳನ್ನು ಆಧಾರವಾಗಿಟ್ಟುಕೊಂಡರು. ಈ ಪುರಾತನರು ಮಾನವ ಧರ್ಮದ ಅಡಿಗಲ್ಲ ಮೇಲೆ ನಿಂತ, ಸುಂದರವಾದ ದೈವಿಕ ಭಾವನೆಗಳನ್ನು ತಮ್ಮ ತೇವಾರ ಪದಿಗಳಲ್ಲಿ ಹಾಡಿದ್ದಾರೆ".[೬]

ಒಂಬತ್ತನೆಯ ಶತಮಾನದಲ್ಲಿ ತಮಿಳುನಾಡಿನ ಸುಂದರಮೂರ್ತಿ ಗಳೆಂಬುವರು ತಿರುತ್ತೊಂಡತ್ತೊಗೈ ಎಂಬ ತಮ್ಮ ಹನ್ನೊಂದು ಪದ್ಯಗಳ ಕಾವ್ಯದಲ್ಲಿ ಪುರಾತನರನ್ನು ಸ್ತುತಿಸುವರು. ಒಮ್ಮೆ ಸುಂದರಮೂರ್ತಿಗಳು ತಿರುವಾರೂರಿನಲ್ಲಿ ಶಿವದರ್ಶನಕ್ಕೆ ಹೋಗುತ್ತಿದ್ದಾಗ ಪೊನ್ನಾಂಬಲದಲ್ಲಿ ನೆರೆದಿದ್ದ ಭಕ್ತಗೋಷ್ಠಿಯನ್ನು ಗಮನಿಸದೆ ಮುಂದೆ ನಡೆದರು. ಅವರ ಈ ನಡತೆ ಆ ಭಕ್ತಗೋಷ್ಠಿಯಲ್ಲಿದ್ದ ಮೆರೆಮಿಂಡದೇವನೆಂಬ ಭಕ್ತನಿಗೆ ಸೊಕ್ಕಿನದಾಗಿ ಕಾಣಿಸಿತು. ಕೋಪಗೊಂಡ ಆ ಭಕ್ತ 'ಭಕ್ತರಿಗೆ ಅಪಚಾರ ಮಾಡಿದ ಸುಂದರಮೂರ್ತಿ ಭಕ್ತಗೋಷ್ಠಿಗೆ ಹೊರಗು' ಎಂದು ಬಹಿಷ್ಕಾರ ಹಾಕಿದನು. ಶಿವ ತನ್ನ ಭಕ್ತ ಸುಂದರಮೂರ್ತಿಯ ಪರವಾ ದಾಗ ಮತ್ತೂ ಕೋಪಗೊಂಡ ಮೆರೆಮಿಂಡದೇವನು ಶಿವನಿಗೂ ಬಹಿಷ್ಕಾರ ಹಾಕಿದನು. ಕೊನೆಗೆ ಸುಂದರಮೂರ್ತಿ ತಪ್ಪಾಯಿತೆಂದು ಒಪ್ಪಿಕೊಂಡು ಕ್ಷಮೆಯಾಚಿಸಿ ಪ್ರಸಿದ್ಧರಾದ ಭಕ್ತರನ್ನೆಲ್ಲ ನೆನೆದು ಅವರಿಗೆಲ್ಲ ನಾನು ಅಡಿಯವನು ಎಂದು ಮೇಲಿಂದ ಮೇಲೆ ನುಡಿಯುತ್ತ ತಿರುತ್ತೊಂಡತ್ತೊಗೈ ಎಂಬ ಭಕ್ತ ಮಾಲೆಯನ್ನು ರಚಿಸಿ ಹಾಡಿದನು. ಇದು ತಿರುತ್ತೊಂಡತ್ತೊಗೈಯಲ್ಲಿ ಹುಟ್ಟಲು ಕಾರಣವಾಗಿ ಬಂದ ಕಥೆ. ಈ ತಿರುತ್ತೊಂಡತ್ತೊಗೈಯಲ್ಲಿ ಸುಂದರಮೂರ್ತಿಗಳ ಹಿಂದಿನವರೂ ಸಮಕಾಲೀನರೂ ಆದ ಅರವತ್ತೆರಡು ಮಂದಿ ಭಕ್ತರ ಸ್ತುತಿಯಿದೆ. ತೀರ ಸಂಕ್ಷಿಪ್ತವಾದ ಪರಿಚಯವಿದೆ.

ಸುಂದರಮೂರ್ತಿ ನಾಯನಾರರು ತಮ್ಮ 'ತಿರುತ್ತೊಂಡರ್‌ತ್ತೊಗೈ' ಎಂಬ ಭಕ್ತಸ್ತೋತ್ರಮಾಲೆಯಲ್ಲಿ ತಮ್ಮನ್ನುಳಿದು ಅರವತ್ತೆರಡು ಮಂದಿ ಶೈವ ನಾರನಾರರುಗಳನ್ನು ಕುರಿತು ಹೇಳಿದ ಅನಂತರ ಎರಡು ಶತಮಾನಗಳು ಕಳೆದ ಮೇಲೆ ಬಂದ, ನಂಬಿಆಂಡಾರ್‌ನಂಬಿಯ 'ತಿರುತ್ತೊಂಡರ್ ತಿರುವನ್ದಾದಿ'ಯು ಸುಂದರಮೂರ್ತಿ ನಾಯನಾರರನ್ನು ಸೇರಿಸಿಕೊಂಡು, ಅರವತ್ತು ಮೂವರ ಭಕ್ತರ ಸ್ತುತಿಯನ್ನು ಸಂಗ್ರಹ ರೂಪದಲ್ಲಿ ಹೇಳಿರುವುದು ಕಂಡುಬರುತ್ತದೆ. ಆದರೆ ಈ ಕಥೆಗಳು ವಿಸ್ತಾರವಾಗಿ ಕಾವ್ಯ ರೂಪದಲ್ಲಿ ಕಾಣಿಸಿಕೊಂಡದ್ದು ಕ್ರಿ.ಶ.ಹನ್ನೆರಡನೆಯ ಶತಮಾನದಲ್ಲಿ ಬಂದ ಶೇಕ್ಕಿಳಾರನ 'ಪೆರಿಯಪುರಾಣ'ದಲ್ಲಿಯೇ ತಿರುತ್ತೊಂಡತ್ತೊಗೈ, ತಿರುತೊಂಡರ್ ತಿರುವನ್ದಾದಿ – ಈ ಕಾವ್ಯಗಳ ಜೊತೆಗೆ, ತಿರುಜ್ಞಾನ ಸಂಬಂಧರ್, ತಿರುನಾವುಕ್ಕರಸರ್, ಸುಂದರಮೂರ್ತಿ ಸ್ವಾಮಿಗಳ್ – ಇವರುಗಳ ತೇವಾರಗಳು ಜನಪ್ರತೀತಿಯಲ್ಲಿದ್ದ ಪುರಾತನರ ಬಗೆಗಿನ ಕಥೆಗಳು, ಶಾಸನಗಳು ಈ ಎಲ್ಲ ಆಧಾರಗಳಿಂದಲೂ ವಿಷಯಗಳನ್ನು ಸಂಗ್ರಹಿಸಿ, ಈ ಪುರಾತನರ ಜೀವನ

೬ ಪಾ.ಸ. ಶ್ರೀನಿವಾಸ, ಸಾರೂಪ್ಯ. ಪುಟ ೪೪ – ೪೫.

ದೃಷ್ಟಾಂತಗಳನ್ನು ಸುಂದರವಾಗಿ ಕಡೆದಿಟ್ಟು ಕಾವ್ಯಲೋಕದಲ್ಲಿ ಅವರನ್ನು ಅಮರರನ್ನಾಗಿಸಿದ ಕೀರ್ತಿ ಶೇಕ್ಕಿಳಾರ್ ಕವಿಯದು.

ಪೆರಿಯಪುರಾಣ ಎಂಬುದು ಕವಿ ಕೃತಿಗಿಟ್ಟ ಹೆಸರಲ್ಲ; ಜನ ಮೆಚ್ಚಿಕೊಟ್ಟ ಹೆಸರು. ತಿರುತ್ತೊಂಡರ್‌ಪುರಾಣಂ ಎಂದು ಕವಿ ಕೃತಿಗಿಟ್ಟ ಹೆಸರು. ದೊಡ್ಡವರೆನ್ನಿಸಿಕೊಂಡವರ ಪುರಾಣವೆಂದು ಅರ್ಥ. ಶಿವಭಕ್ತರಪುರಾಣವೆಂದು ಅದರ ಅರ್ಥ. ಇದು ತಮಿಳರಿಂದ ಪರಮಪೂಜ್ಯವೆಂದೆನಿಸಲ್ಪಟ್ಟ ಹನ್ನೆರಡು 'ತಿರುಮುರೈ' (ಪವಿತ್ರ ಗ್ರಂಥ)ಗಳಲ್ಲಿ ಒಂದು. ಈ ಶೈವ ಸಂತರು ತಮಿಳುನಾಡಿನಲ್ಲಿ ಬಾಳಿ ತಮ್ಮ ನೇರ ನಡೆ-ನುಡಿಗಳಿಂದ, ತಿಳಿಯಾದ ಚಾರಿತ್ರದಿಂದ ಜನಮನವನ್ನು ಆಕರ್ಷಿಸಿದರು. ಇವರಲ್ಲಿ ನಾನಾ ವೃತ್ತಿ ಹಾಗೂ ಕುಲಗೋತ್ರದವರಿದ್ದರು, ಸ್ತ್ರೀಯರಿದ್ದರು: ಸಂಸಾರಿಗಳಿದ್ದರು: ಸನ್ಯಾಸಿಗಳಿದ್ದರು. ಈ ಮಹಾಪುರುಷರ ಅನುಪಮವಾದ ಶಿವಭಕ್ತಿ, ಶಿವಜ್ಞಾನ, ಶಿವನಿಷ್ಠೆ, ಜಂಗಮಸೇವಾಗುಣಗಳು, ಅವರು ಮಾಡಿದಂತಹ ಅಸಾಮಾನ್ಯ ಕೆಲಸಗಳು ಜನಸಾಮಾನ್ಯರ ಮನವನ್ನಷ್ಟೇ ಅಲ್ಲ ರಾಜಮಹಾರಾಜರುಗಳ ಮನಸ್ಸನ್ನೂ ಸೂರೆಗೊಂಡವು. ಜನತೆಯ ಕಣ್ಣು-ಮನಗಳಿಗೆ ದೇವಪುರುಷರಾಗಿ ಕಂಗೊಳಿಸಿದ ಇವರನ್ನು, ಅಂದಿನಂತೆ ಇಂದೂ ಪೂಜಿಸುತ್ತಿರುವರು. ಭಕ್ತ ಜನರು ಅವರ ಗುಣಗಾನವನ್ನು ಇಂದೂ ಮಾಡುತ್ತಿರುವರು.

ಪೆರಿಯಪುರಾಣದಲ್ಲಿ ಪ್ರತಿಯೊಬ್ಬನ ಕಥೆಯನ್ನೂ ಒಂದೊಂದು ಪುರಾಣವಾಗಿ ಪ್ರತ್ಯೇಕವಾಗಿ ಪರಿಗಣನೆ ಮಾಡಲಾಗಿದೆ. ಶೇಕ್ಕಿಳಾರ್ ಅನುಪಮ ಭಕ್ತ ಶಿರೋಮಣಿ: ಶಿವನನ್ನು ಶಿವನ ಭಕ್ತರನ್ನೂ ಹಾಡಿ ಹೊಗಳುವಲ್ಲಿ ಮೈಮರೆಯುವನು. ಪೆರಿಯ ಪುರಾಣದ ಪ್ರತಿಯೊಂದು ಕಥೆಯ ಅಂತ್ಯಪದ್ಯದಲ್ಲಿ ಸಂಕ್ಷಿಪ್ತವಾಗಿ ನಾಯಕನ ಹಿರಿಮೆಯನ್ನು ಕೊಂಡಾಡಲಾಗಿದೆ.

"ಈ ಅರುವತ್ತು ಮೂವರಲ್ಲಿ ಕೆಲವರು ಮಾತ್ರ ಸಮಕಾಲೀನರು: ಒಬ್ಬರನ್ನೊಬ್ಬರು ಕಂಡು ಕೇಳಿ ಕೂಡಿ ನಡೆದವರು. ಬಹುಮಂದಿ ಬೇರೆ ಬೇರೆ ಸನ್ನಿವೇಶದಲ್ಲಿ ಬಾಳಿದವರು. ಯಾರೊಬ್ಬರನ್ನೂ ಸಮಗ್ರ ಗ್ರಂಥಕ್ಕೆ ನಾಯಕರೆನ್ನಲಾಗುವುದಿಲ್ಲ. ಒಬ್ಬೊಬ್ಬರದೂ ಬೇರೆ ಬೇರೆ ಕಥೆಯೇ. ಆ ಒಂದೊಂದು ಕಥೆಯೂ ಪ್ರತ್ಯೇಕ ಕಾವ್ಯ ಖಂಡ. ಹಾರದಲ್ಲಿನ ಬಿಡಿ ಮುತ್ತುಗಳೆಲ್ಲದರೊಳಗೂ ವ್ಯಾಪಿಸಿ ಒಂದುಗೂಡಿಸುವ ದಾರದಂತೆ, ಶಿವಭಕ್ತಿಯೊಂದೇ ಈ ಎಲ್ಲ ಪುರಾತನರ(ಕಥೆಗಳ)ನ್ನೂ ಒಂದುಗೂಡಿಸುವ ಸೂತ್ರ. ಹೀಗಿದ್ದರೂ ಪೆರಿಯಳಪುರಾಣದ ಕವಿ ಸುಂದರಮೂರ್ತಿಸ್ವಾಮಿಗಳೇ ಕಥಾ ನಾಯಕರೆಂದು ಭಾವಿಸಿದಂತಿದೆ. ಪುರಾಣ ಪ್ರಾರಂಭವಾಗುವುದು ಸುಂದರ ಮೂರ್ತಿಯ ಅವತಾರ ಕಥೆಯಿಂದ: ಮುಕ್ತಾಯ ಹೊಂದುವುದು ಆತನ ಕೈಲಾಸಾಗಮನದ

ನಿರೂಪಣೆಯಿಂದ. ಈ ನಡುವೆ ಉಳಿದ ಅರವತ್ತೆರಡು ಮಂದಿಯ ವೃತ್ತಾಂತವೂ ವರ್ಣಿತವಾಗಿದೆ".[೮]

"ಶೇಕ್ಕಿಳಾರನು ತನ್ನ ಪೆರಿಯಪುರಾಣಕ್ಕೆ ತಿರುವಂದಾದಿಯಿಂದ ಮುಖ್ಯ ಆಕರವನ್ನು ಪಡೆದುಕೊಂಡಿದ್ದರೂ, ತನ್ನ ಕಾವ್ಯ ದಿಸ್ತರಣೆಗೆ, ನೆರವಾದ ಜನಜನಿತ ಕಥೆಗಳು, ತೇವಾರ ಸ್ತೋತ್ರಗಳಲ್ಲಿ ವರ್ಣಿಸಲಾದ ಸಂದರ್ಭಗಳು, ಶಾಸನೇತಿಹಾಸಗಳ ಆಧಾರಗಳು ಮೊದಲಾದುವನ್ನು ಉಪಯೋಗಿಸಿ ಕೊಂಡಿರುವುದು ತಿಳಿದುಬರುತ್ತದೆ. ಈ ಭಕ್ತರು ನೆಲೆಸಿದ್ದ, ಸಂದರ್ಶಿಸಿದ್ದ ಊರುಗಳನ್ನೂ, ಕ್ಷೇತ್ರಗಳನ್ನೂ ಇವನು ಸಂದರ್ಶಿಸಿರಬೇಕೆಂದು, ಇವನ ಕಾವ್ಯದಲ್ಲಿ ಬರುವ ವರ್ಣನೆಗಳಿಂದ ತಿಳಿಯುತ್ತದೆ. ಇದರಿಂದ ಪೆರಿಯ ಪುರಾಣವು ಅರುವತ್ತು ಮೂವರ ಕಥೆಗಳನ್ನು ಹೇಳುವ ಪುರಾಣ ಮಾತ್ರವಾಗಿರದೆ, ಇತಿಹಾಸವನ್ನು ಬರೆಯುವ ಚರಿತ್ರ ಗ್ರಂಥವೂ ಹೌದು. ಇದು ತಮಿಳು ಕಾವ್ಯ ಸಂಸ್ಕೃತಿಗಳ ಮೇಲೆ ಬೆಳಕು ಬೀರುವ, ಇತಿಹಾಸದ ಹಿನ್ನೆಲೆಯುಳ್ಳ ಕಾವ್ಯವೆಂದು ಪರಿಗಣಿಸಬಹುದು."[೯]

---

೮. ಎಲ್.ಗುಂಡಪ್ಪ : ತಮಿಳು ಪುರಾತನರ ಕಥೆಗಳು (ಹರಿಹರ (ಸಂ) ದಿ.ಸೀತಾರಾಮಯ್ಯ ಕನ್ನಡ ಕವಿಕಾವ್ಯ ಪರಂಪರೆ) ಪುಟ ೯೪

೯. ಅಡಿಟಿಪ್ಪಣಿ ೭ರಂತೆ : ಪುಟ ೮೦

## ಅಧ್ಯಾಯ - ೪

# ಹರಿಹರ ಮತ್ತು ಪೆರಿಯಪುರಾಣದ ತೌಲನಿಕ ಅಧ್ಯಯನ

ಶೇಕ್ಕಿಳಾರನು ತಮಿಳುನಾಡಿನ ಪ್ರಸಿದ್ಧ ಶೈವ ನಾಯನ್ಮಾರರ ಜೀವನ ವೃತ್ತಾಂತವನ್ನು ಪೆರಿಯಪುರಾಣದ ಮೂಲಕ ಪರಿಚಯಿಸ ಹೊರಟಂತೆ ಕನ್ನಡದಲ್ಲಿ ಹರಿಹರನು, ತನ್ನ ರಗಳೆಗಳ ಮೂಲಕ ಶೈವ ನಾಯನ್ಮಾರರಲ್ಲಿ ಬಹಳಷ್ಟು ಮಂದಿಯ ಜೀವನ ವೃತ್ತಾಂತವನ್ನು ತಿಳಿಸಿದ್ದಾನೆ.

ತಮಿಳುನಾಡಿನ ಶೈವಪುರಾತನರ ಬಗೆಗೆ ರಗಳೆಗಳನ್ನು ರಚಿಸುವಾಗ ಹರಿಹರ ಶೇಕ್ಕಿಳಾರನ ಪೆರಿಯಪುರಾಣವನ್ನು ಆಧರಿಸಿದ್ದನೆ, ಇಲ್ಲವೆ? ಎಂಬುದರ ಬಗೆಗೆ ಹಾಗೂ ಸಂಸ್ಕೃತ ಕೃತಿಗಳ (ಉಪಮನ್ಯು ಭಕ್ತ ವಿಲಾಸ, ಅಗಸ್ತ್ಯ ಭಕ್ತ ವಿಲಾಸ, ಶಿವರಹಸ್ಯ) ಪ್ರೇರಣೆ ಪಡೆದಿರುವನೆ, ಇಲ್ಲವೆ? ಎಂಬುದರ ಬಗೆಗೆ ವಿದ್ವಾಂಸರಲ್ಲಿ ಸಾಕಷ್ಟು ಚರ್ಚೆ ನಡೆದಿದೆ. ಈ ಸಂಬಂಧ ಹಲವು ವಿದ್ವಾಂಸರುಗಳ ಅಭಿಪ್ರಾಯಗಳು ಈ ಕೆಳಕಂಡಂತಿವೆ.

"ಹರಿಹರನ ರಗಳೆಗಳ ಕಥಾವಸ್ತುಗಳಿಗೆ ಆಕರವಾವುದೆಂಬುದೇ ಖಚಿತವಾಗಿ ತಿಳಿಯುವಂತಿಲ್ಲ. ಅವನ್ನು ನಿರ್ಮಿಸಿದಾತನು ಅವನಲ್ಲವೆಂಬುದೇನೋ ದಿಟ. ತಮಿಳು ಸಾಹಿತ್ಯದಿಂದ ಅವನಿಗೆ ಈ ಕಥೆಗಳು ಲಭಿಸಿವೆ. ಆಕರದ ದೃಷ್ಟಿಯಿಂದ ಹರಿಹರನ ಪುರಾತನರ ರಗಳೆಗಳು ಕನ್ನಡಿಗರಿಗೆ ಎಷ್ಟು ಸಮಸ್ಯೆಯಾಗಿವೆಯೋ ತಮಿಳರಿಗೂ ಅಷ್ಟೇ ಸಮಸ್ಯೆಯಾಗಿವೆ. ಕನ್ನಡ ಬಲ್ಲ ತಮಿಳು ವಿದ್ವಾಂಸ ಹರಿಹರನ ಕೃತಿಗಳನ್ನು ಓದಿದಾಗ ಅವನಿಗೆ ಪರಿಚಯವಾಗಿರುವ ಕಥೆಗಳಿಗೂ ಈ ಕಥೆಗಳಿಗೂ ಇರುವ ವ್ಯತ್ಯಾಸಗಳನ್ನು ನೋಡಿ ಚಕಿತನಾಗುತ್ತಾನೆ: ಹರಿಹರನ ಕಥೆಗಳಿಗೆ ತಮಿಳಿನಲ್ಲಿ ಮೂಲವಿಲ್ಲವಲ್ಲ ಎಂದು ಬೆರಗಾಗುತ್ತಾನೆ. ತಮಿಳನ್ನು ಬಲ್ಲ ಕನ್ನಡ ವಿದ್ವಾಂಸರಿಗೂ ಹೀಗೆಯೇ ಆಗುತ್ತದೆ."[೧]

✓ ಡಾ॥ ಆರ್. ಸಿ. ಹಿರೇಮಠ ಅವರು ಹರಿಹರನ ಹದಿನೇಳು ರಗಳೆಗಳನ್ನು ಪೆರಿಯ ಪುರಾಣದ ಕಥೆಗಳೊಂದಿಗೆ ಹೋಲಿಸಿ ನೋಡಿ 'ರಗಳೆ ಪೆರಿಯಪುರಾಣಗಳ ನಡುವೆ ನಿಕಟ ಸಂಬಂಧವಿದ್ದರೂ ಹರಿಹರದೇವನ ಕಥೆಗಳು ಎಷ್ಟೋ ಕಡೆಗೆ ಮಾರ್ಪಟ್ಟಿವೆ.'[೨] ಎಂದಿರುವರು.

ಎಚ್.ದೇವಿರಪ್ಪನವರು "ಹರಿಹರನು ಪುರಾತನರ ರಗಳೆಗಳನ್ನೂ 'ತಿರುತ್ತೊಂಡತೊಗೈ', 'ತಿರುತ್ತೊಂಡರ್ ತಿರುವಂದಾದಿ', 'ತೇವಾರಂ' ಗೀತೆಗಳೇ ಮೊದಲಾದ ಶೈವಕೃತಿಗಳನ್ನೂ ತನ್ನ ಕಾಲದಲ್ಲಿ ಪ್ರಚಾರದಲ್ಲಿದ್ದಂಥ ದಂತಕಥೆಗಳನ್ನೂ ಓದಿ ಕೇಳಿ ಅರಿತು ಅರಗಿಸಿಕೊಂಡು ಭಾವದಿಂದ ಬೆಳೆಯಿಸಿ ಬುದ್ಧಿಯಿಂದ

---

೧.ಡಿ.ಎಲ್.ನರಸಿಂಹಾಚಾರ್ಯ್ : ಶರಣಚರಿತ ಮಾನಸಂ, ಮುನ್ನುಡಿ, ಪುಟ ೧೦

೨. ಉದ್ಧೃತ, ಜಿ.ಎಸ್.ಶಿವರುದ್ರಪ್ಪ (ಸಂ) ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂ-೩, ಪುಟ ೨೭೬

ಬಲಿಯಿಸಿ ಕಲ್ಪನೆಯಿಂದ ಅರಳಿಸಿ ಪ್ರತಿಭೆಯಿಂದ ರಸದುಂಬಿಸಿ ಶಿವಭಕ್ತಿಯ ದೃಷ್ಟಿಯಿಟ್ಟು ಕನ್ನಡ ಕುಲರಸಿಕರಿಗೆ ಒಪ್ಪಿಸಿರುವನು."[೩] ಎಂದಿದ್ದಾರೆ.

ಡಿ. ಎಲ್. ನರಸಿಂಹಾಚಾರ್ಯರು "----ಹರಿಹರನು ಪೆರಿಯ ಪುರಾಣದಿಂದ ಕಥೆಗಳನ್ನು ಮಾತ್ರ ತೆಗೆದುಕೊಂಡು, ಅವುಗಳನ್ನು ತನಗೆ ತೋಚಿದ ರೀತಿಯಲ್ಲಿ ಮಾರ್ಪಾಟು ಮಾಡಿ ಕಾವ್ಯಗಳನ್ನು ರಚಿಸಿದ್ದಾನೆ ಎಂದು ಸದ್ಯಕ್ಕೆ ಗ್ರಹಿಸಬಹುದು".[೪] ಎಂದು ಒಂದೆಡೆ ಅಭಿಪ್ರಾಯಪಟ್ಟು, ಅವರೇ ಮತ್ತೊಂದೆಡೆಯಲ್ಲಿ. "-- ಪೆರಿಯಪುರಾಣದ ಕಥಾವಸ್ತುಗಳನ್ನು ಸೃಷ್ಟಿಸಿದವನು ಶೇಕ್ಕಿಳಾರ್ ಕವಿಯಲ್ಲ, ಅವನಿಗಿಂತ ಹಿಂದಿನ ತಮಿಳು ಸಾಹಿತ್ಯದಲ್ಲಿ ಈ ಕಥೆಗಳಿದ್ದಿರಬಹುದು; ಅಥವಾ ಈ ಕಥೆಗಳು ಜನಸಾಮಾನ್ಯದ ಬಾಯಿಮಾತಿನಲ್ಲಿ ಪ್ರಚಾರದಲ್ಲಿದ್ದಿರಬಹುದು. ಇವನಿಗೂ ಹರಿಹರನಿಗೂ ಈಗ ನಷ್ಟವಾಗಿರುವ ಸಮಾನ ತಮಿಳು ಮೂಲವೊಂದಿದ್ದಿರಬಹುದು. ಈ ಮೂಲವನ್ನು ಇಬ್ಬರೂ ತಮತಮಗೆ ಉಚಿತ ಕಂಡ ರೀತಿಯಲ್ಲಿ ಉಪಯೋಗಿಸಿಕೊಂಡಿರಬಹುದು. ಇದೆಲ್ಲಾ ಬಹುದು ಎಂಬ ಸಂದೇಹಗ್ರಸ್ತ ಊಹಾ ಪ್ರಪಂಚ"[೫] ಎಂದಿರುವವರು.

ಡಾ|| ಹಿರೇಮಲ್ಲೂರ ಈಶ್ವರನ್‌ರವರು "ಹರಿಹರನು ಪೆರಿಯಪುರಾಣವನ್ನು ನೋಡಿರುವುದಷ್ಟೇ ಅಲ್ಲ, ತನ್ನ ಕೃತಿಗಳಿಗೆ ಹೆಚ್ಚಿನ ಕಾವ್ಯಾಧಾರವನ್ನು ಅದರಿಂದಲೇ ಪಡೆದಿರುವನೆಂಬುದು ರಗಳೆಯ ಕಥೆಗಳನ್ನು ಪೆರಿಯಪುರಾಣದ ಕಥೆಗಳನ್ನೂ ಹೋಲಿಸಿ ನೋಡಿದಾಗ ಕಂಡುಬರುತ್ತದೆ. ಆದರೆ ಮೂಲ ಕಥೆಯನ್ನು ಮಕ್ಕಾಮಕ್ಕಿಯಾಗಿ ಹರಿಹರನು ಎತ್ತಿಕೊಂಡಿರುವುದಿಲ್ಲ, ತನಗೆ ಬೇಕಾದ ಬದಲಾವಣೆಗಳನ್ನು ಆತನು ಕಥೆಯಲ್ಲಿ ಮಾಡಿ ಕೊಂಡಿದ್ದರೂ ಅದರ ಮೂಲಾಧಾರವನ್ನು ಅವನು ಕಂಡದ್ದು ಪೆರಿಯಪುರಾಣದಲ್ಲಿಯೇ. ಪೆರಿಯಪುರಾಣಂ ಕಾವ್ಯಕ್ಕೆ ಆಧಾರವಾದದ್ದು ತಿರುಅಂದಾದಿ ಹರಿಹರನು ಈ ತಿರು ಅಂದಾದಿಯನ್ನು ನೋಡಿರಬೇಕೆಂದು ತಿಳಿಯುತ್ತದೆ".[೬] ಎಂದು ಅಭಿಪ್ರಾಯಪಟ್ಟು ದೃಷ್ಟಾಂತಕ್ಕೆ ಹರಿಹರ ಕೃತ ತಿರುನೀಲಕಂಠ ಮತ್ತು ಕಣ್ಣಪ್ಪನ ರಗಳೆಯನ್ನು ಶೇಕ್ಕಿಳಾರನ ತಿರುನೀಲಕಂಠ ಹಾಗೂ ಕಣ್ಣಪ್ಪನಾಯನಾರರ ಪುರಾಣಗಳಿಗೆ ಹೋಲಿಸಿ ತೋರಿಸಿರುವರು.

ತಮಿಳಿನ ಹಿರಿಯ ವಿದ್ವಾಂಸರಾದ ಡಾ|| ಟಿ.ಪಿ.ಮೀನಾಕ್ಷಿ ಸುಂದರಂ ಅವರು ಪೆರಿಯಪುರಾಣ 'ಶೆರ್‍ರೊಳಿವುಗಳ್' ಎಂಬ ಸಂಕಲಿತ ಗ್ರಂಥದಲ್ಲಿರುವ ತಮ್ಮ ಪ್ರಬಂಧದಲ್ಲಿ

"ಬಸವ ಕಾಲಾನಂತರ ಬಂದ ವೀರಶೈವ ಕವಿ-ಯೋಗಿ ಹರಿಹರನು ತಮಿಳುನಾಡಿಗೆ ಬಂದು ಈ ಭಕ್ತರು ನೆಲೆಸಿದ ಸ್ಥಳಗಳನ್ನೆಲ್ಲಾ ಕಂಡು ಅಲ್ಲಿ

---

೩. ಶರಣಚರಿತ ಮಾನಸಂ. ಪೀಠಿಕೆ, ಪುಟ, ೨೦೮-೨೦೯

೪. ಅಡಿಟಿಪ್ಪಣಿ ೨ರಂತೆ, ಪುಟ ೩.೨೭

೫. ಅಡಿಟಿಪ್ಪಣಿ ೧ರಂತೆ ಪುಟ-೧೦

೬ ಹರಿಹರನ ಕೃತಿಗಳು, ಪುಟ ೪೯.

ಪ್ರಚಾರದಲ್ಲಿದ್ದ ತಮಿಳು ಕಥೆಗಳನ್ನು ಅರಿತುಕೊಂಡು, ರಗಳೆ ಎಂಬ ಛಂದೋರೂಪದಲ್ಲಿ ಈ ಭಕ್ತರ ಕಥೆಗಳನ್ನು ಮನಮುಟ್ಟುವಂತೆ ಕನ್ನಡದಲ್ಲಿ ವರ್ಣಿಸಿದ್ದಾನೆ. ಆಮೇಲೆ ಬಂದ ವೀರಶೈವ ಕವಿಗಳು ಈ ಭಕ್ತರ ಕಥೆಗಳನ್ನು ಕೂಡಿಸಿ ಬರೆದಿದ್ದಾರೆ"[೭] ಎಂದು ಹೇಳಿದ್ದಾರೆ. ಇದರಿಂದ ಅವನು ತಮಿಳು ಭಾಷೆಯಲ್ಲಿ ದೊರೆತ ಆಧಾರಗಳನ್ನೇ ಆಶ್ರಯಿಸಿದ್ದನೆಂದು ತಿಳಿಯುತ್ತದೆ. ತಮಿಳುನಾಡಿನಲ್ಲಿ ಪ್ರಚಾರದಲ್ಲಿದ್ದ ಪುರಾತನರನ್ನು ಕುರಿತ ಕಾವ್ಯಗಳನ್ನು ದಂತಕಥೆಗಳನ್ನು ಹರಿಹರನು ತನ್ನ ಕೃತಿರಚನೆಗಾಗಿ ಕುತೂಹಲದಿಂದ ಅಭ್ಯಾಸ ಮಾಡಿರಬೇಕೆಂದು ತೋರುತ್ತದೆ.

ಡಾ|| ಎಸ್. ವಿದ್ಯಾಶಂಕರ ಅವರು ನಂಬಿಯಣ್ಣನ ರಗಳೆಯ ಮೂಲಕ ಹಲವು ಉದಾಹರಣೆಗಳನ್ನು ನೀಡಿ 'ಪೆರಿಯಪುರಾಣ'ದಿಂದ ಹರಿಹರನು ಆಕರವನ್ನು ಪಡೆದುಕೊಂಡಿಲ್ಲ ಎಂದು ಸ್ಪಷ್ಟವಾಗಿ ನುಡಿಯುತ್ತಾರೆ. ಹರಿಹರನ ಪುರಾತನರ ರಗಳೆಗಳಿಗೆ ಪೆರಿಯಪುರಾಣದ 'ಪ್ರೇರಣೆ- ಪ್ರಭಾವ'ವಿಲ್ಲ. ಶೇಕ್ಕಿಳಾರನ ಪೆರಿಯಪುರಾಣಕ್ಕೆ ಮೂಲ ಆಕರ ಗ್ರಂಥಗಳಾಗಿರುವ 'ತಿರುತ್ತೊಂಡತ್ತೊಗೈ', 'ತಿರುತ್ತೊಂಡರ್ ತಿರುವಂದಾದಿ'ಗಳು, ನಾಯನ್ಮಾರರ ಸ್ತೋತ್ರಗಳು, ಜನಬಳಕೆಯ ಕಥೆಗಳು ಹರಿಹರನಿಗೆ ಆಧಾರವಾಗಿರಬೇಕೆಂದು ಮತ್ತು ಹರಿಹರನು ತಮಿಳುನಾಡಿನಾದ್ಯಂತ ಸಂಚರಿಸಿ, ಶೈವನಾಯನ್ಮಾರರ ಬಗೆಗೆ ವಿಷಯ ಸಂಗ್ರಹಣೆ ಮಾಡಿರುವಂತಿದೆ ಎಂಬ ಅಭಿಪ್ರಾಯಕ್ಕೆ ಬಂದಿದ್ದಾರೆ. ತಮ್ಮ ಅಭಿಪ್ರಾಯದ ಪುಷ್ಟಿಗಾಗಿ ನಂಬಿಯಣ್ಣನ ರಗಳೆಯಲ್ಲಿ ಕಂಡು ಬರುವ ಹರಿಹರನ ಸ್ವತಂತ್ರ ಕಲ್ಪನೆಯ ಅನೇಕ ಪ್ರಸಂಗಗಳನ್ನು ಪಟ್ಟಿಮಾಡಿದ್ದಾರೆ. ರಗಳೆಗಳ ಕಥೆಗಳನ್ನು ಪೆರಿಯಪುರಾಣದೊಂದಿಗೆ ಹೋಲಿಸಿ ನೋಡುವಾಗ ಇವುಗಳನ್ನು ತಿಳಿಸಲಾಗುವುದು.

"ಹರಿಹರನಿಗೆ ಈ ಪುರಾತನರ ಬಗೆಗೆ ಕೃತಿರಚಿಸಲು ಪ್ರೇರಣೆ ದೊರೆತುದು ಶೇಕ್ಕಿಳಾರನಿಂದ ಎಂಬ ಮಾತು ಪ್ರಚಲಿತವಿದೆ. ಇದು ಸತ್ಯಕ್ಕೆ ದೂರವಾದುದು. ಮೊದಲನೆಯದಾಗಿ, ಹರಿಹರನು ಶೇಕ್ಕಿಳಾರನ ಕಾಲಕ್ಕೆ ತೀರ ಹತ್ತಿರದವನು. ಹರಿಹರನು ಕೃತಿ ರಚನೆ ಮಾಡಹೊರಟಾಗ ಶೇಕ್ಕಿಳಾರ್ ಅದಾಗ ತಾನೇ ಪೆರಿಯ ಪುರಾಣವನ್ನು ಬರೆದು ಮುಗಿಸಿರಬಹುದು. ಎರಡನೆಯದಾಗಿ, ಹರಿಹರನ ಕೃತಿಗಳಿಗೂ ಪೆರಿಯ ಪುರಾಣದ ಕಥೆಗಳಿಗೂ ನಿರೂಪಣೆಯ ದೃಷ್ಟಿಯಲ್ಲಿ ಗಮನಾರ್ಹವಾದ ವ್ಯತ್ಯಾಸಗಳಿವೆ. ಪೆರಿಯ ಪುರಾಣದ ಪ್ರಭಾವ ಹರಿಹರನ ರಗಳೆಗಳ ಮೇಲೆ ಆಗಿದೆ ಎಂಬ ಅನೇಕ ವಿದ್ವಾಂಸರ ತೀರ್ಮಾನ ಇಂದು ಬದಲಾಗಬೇಕಾಗಿದೆ".[೮]

ಹರಿಹರನಿಗೆ ತಮಿಳುಭಾಷೆಯ ಪರಿಚಯವಿರುವುದು ಸ್ಪಷ್ಟವಾಗಿ ತಿಳಿದುಬರುತ್ತದೆ. ರಗಳೆಯಲ್ಲಿ ತಮಿಳು ಪದ ಪ್ರಯೋಗಗಳೂ ಕಂಡುಬರುತ್ತವೆ. ಉದಾಹರಣೆಗೆ, ಕುಶವ, ಅಂಬಲರ್ಮ, ತಿರುನಾಳ್, ತಿರುಪಾಡು ಇತ್ಯಾದಿ. ತಮಿಳು

೭. ಉದ್ಧೃತ ಪಾ.ಸ.ಶ್ರೀನಿವಾಸ, ಸಾರೂಪ್ಯ, ಪುಟ ೮೧
೮. ಎಸ್. ವಿದ್ಯಾಶಂಕರ್, ನಂಬಿಯಣ್ಣ : ಒಂದು ಅಧ್ಯಯನ, ಪುಟ ೧೫೭

ಪದಗಳನ್ನು ರಗಳೆಗಳಲ್ಲಿ ಬಳಸಿದ್ದಾನೆ ಎನ್ನುವ ಕಾರಣದಿಂದ ಹರಿಹರನಿಗೆ ತಮಿಳು ಭಾಷೆಯ ಜ್ಞಾನ ಸಾಕಷ್ಟು ಇದ್ದಿದ್ದರ ಬಗ್ಗೆ ಹಾಗೂ ತಮಿಳುನಾಡಿನ ಜೊತೆ ನಿಕಟ ಸಂಪರ್ಕವಿರುವಂತೆ ಕಾಣುತ್ತದೆ. ಈ ಹಿನ್ನೆಲೆಯಲ್ಲಿ ತಮಿಳುನಾಡಿನ ಉದ್ದಗಲಕ್ಕೂ ಸಂಚರಿಸಿ ಅರುವತ್ತು ಮೂವರು ಪುರಾತನರ ಬಗೆಗೆ ವಿಷಯ ಸಂಗ್ರಹಣೆ ಮಾಡಿರುವಂತಿದೆ.

"ಹರಿಹರನು ತಮಿಳುನಾಡಿಗೆ ಬಂದು ಈ ಭಕ್ತರು ನೆಲೆಸಿದ ಸ್ಥಳಗಳನ್ನೆಲ್ಲಾ ಸಂದರ್ಶಿಸಿರಬೇಕಾದರೆ, ಅವನಿಗಿಂತ ಕೆಲವೇ ಕಾಲಕ್ಕೆ ಮುಂಚೆ ಆ ನಾಡಿನ ಪ್ರಧಾನಿಯಾಗಿ ತಮಿಳುನಾಡಿನ ಶೈವಭಕ್ತ ಜನರಿಂದ ಗೌರವಾದರಗಳಿಗೆ ಪಾತ್ರನಾದ ಶೇಕ್ಕಿಳಾರನ ಬಗ್ಗೆಯೂ, ಅವನ ಸುಧೀರ್ಘವಾದ ಕಾವ್ಯದ ಬಗ್ಗೆಯೂ ತಿಳಿದುಕೊಂಡಿರಲಿಲ್ಲವೆಂದರೆ, ಅದನ್ನು ಒಪ್ಪುವುದು ಕಷ್ಟವಾಗುತ್ತದೆ"[೯] ಎಂದು ಡಾ|| ಪಾ.ಶ.ಶ್ರೀನಿವಾಸ ಅವರು ಅಭಿಪ್ರಾಯ ಪಡುತ್ತಾರೆ. ಇವರ ಅಭಿಪ್ರಾಯದ ಸಾರವಿಷ್ಟೇ ಹರಿಹರ ಪೆರಿಯಪುರಾಣವನ್ನೂ ಒಳಗೊಂಡಂತೆ ಎಲ್ಲಾ ಮೂಲಗಳಿಂದಲೂ ಆಕರಗಳನ್ನು ಸಂಗ್ರಹಿಸಿ ಪುರಾತನರ ರಗಳೆಗಳನ್ನು ರಚಿಸಿದ್ದಾನೆ.

"ಶೇಕ್ಕಿಳಾರ್ ಅನಪಾಯ ಚೋಳನ ಕಾಲದಲ್ಲಿ (೧೦೩೦-೧೧೦೪) ಇದ್ದವನು. ಹರಿಹರನ ಕಾಲಕ್ಕೆ ಬಹುಶಃ ಅವನು 'ಪೆರಿಯಪುರಾಣ'ವನ್ನು ರಚಿಸುತ್ತಿದ್ದಿರಬಹುದು. ಇಲ್ಲವೆ ಕೃತಿ ರಚನೆಯನ್ನು ಆ ವೇಳೆಗೆ ಮಾಡಿ ಮುಗಿಸಿರಬಹುದು ಅದು ಇನ್ನೂ ವ್ಯಾಪಕವಾದ ಪ್ರಚಾರವನ್ನೂ ಜನಮನ್ನಣೆಯನ್ನೂ ಪಡೆಯದೇ ಇದ್ದ ಕಾಲದಲ್ಲಿ ಹರಿಹರ ನಾಯನ್ಮಾರರನ್ನು ಕುರಿತು ಕೃತಿ ರಚನೆ ಮಾಡಿರಬಹುದು".[೧೦] ಎಂದು ಮದ್ರಾಸು ವಿಶ್ವವಿದ್ಯಾನಿಲಯದ ತಮಿಳು ವಿಭಾಗದ ಮುಖ್ಯಸ್ಥರಾಗಿದ ಎಂ. ಸಂಜೀವಿಯವರು ಅಭಿಪ್ರಾಯ ಪಟ್ಟಿದ್ದಾರೆ.

"ಅರುವತ್ತುಮೂವರು ಪುರಾತನರನ್ನು ಕುರಿತು ಸಂಸ್ಕೃತದಲ್ಲಿ 'ಅಗಸ್ತ್ಯಶಿವಭಕ್ತ ವಿಲಾಸ', 'ಉಪಮನ್ಯು ಶಿವಭಕ್ತ ವಿಲಾಸ' ಹಾಗೂ 'ಶಿವರಹಸ್ಯ' ಗಳೆಂಬ ಕೃತಿಗಳು ಬಂದಿವೆ. ಹರಿಹರನು, ಅರುವತ್ತುಮೂವರು ಪುರಾತನರನ್ನು ಕುರಿತು ಬರೆಯುವಾಗ ಈ ಸಂಸ್ಕೃತ ಕೃತಿಗಳನ್ನು ಮೂಲ ಆಕರವಾಗಿ ಬಳಸಿಕೊಂಡಂತ್ತಿಲ್ಲ. ಈ ಸಂಸ್ಕೃತ ಗ್ರಂಥಗಳು ಪೆರಿಯಪುರಾಣ ಹುಟ್ಟಿ (ಕ್ರಿ.ಶ ೧೧೪೫) ಜನಪ್ರಿಯತೆಯನ್ನೂ ರಸಿಕ ವಿದ್ವಜ್ಜನರ ಮನ್ನಣೆಯನ್ನು ಪಡೆದ ಮೇಲೆ ಬಹುಶಃ ಹದಿನಾಲ್ಕನೆಯ ಶತಮಾನದಲ್ಲಿ ರಚಿಸಲ್ಪಟ್ಟವೆಂದು ಹೇಳಬಹುದು".[೧೧]

ಪೆರಿಯಪುರಾಣದಲ್ಲಿಲ್ಲದ ಎಷ್ಟೋ ಸಂಗತಿಗಳು ಅತಿಮುಖ್ಯ ಘಟನೆಗಳು ಹರೀಶ್ವರನ 'ರಗಳೆ'ಗಳಲ್ಲಿ ನಿರೂಪಿಸಲ್ಪಟ್ಟಿವೆ. 'ಪುರಾಣ'ದ ಮೆಯ್ಪೊರುಣಾಯ ನಾರನು ರಗಳೆಯಲ್ಲಿ 'ಸೇದಿರಾಜ', ಎಂದು ಕರೆಯಲ್ಪಟ್ಟಿದ್ದಾನೆ. 'ರಗಳೆ'ಯಲ್ಲಿ

---

೯. ಸಾರೂಪ್ಯ, ಪುಟ ೮೨

೧೦. ಎಸ್. ವಿದ್ಯಾಶಂಕರ್, ನಂಬಿಯಣ್ಣ : ಒಂದು ಅಧ್ಯಯನ, ಅರಿಕೆ ಪುಟ ೧೦

೧೧. ಎಚ್. ದೇವಿರಪ್ಪ, ಶರಣಚರಿತಮಾನಸಂ, ಪುಟ ೨೦೪

ಹೇಳುವಂತೆ ಇಳೆಯಾಂಡಗುಡಿಮಾರನ ಮಗನು, ಊಟದ ಎಲೆಗಳನ್ನು ತರಹೋಗಿ ಸರ್ಪದಷ್ಟನಾಗಿ ಸತ್ತವನು ಶಿವಕೃಪೆಯಿಂದ ಮತ್ತೆ ಬದುಕುವನು. ಈ ಸಂಗತಿ ಪೆರಿಯಪುರಾಣದ ಈ ಕಥೆಯಲ್ಲಿಲ್ಲ. ಮತ್ತೆಲ್ಲಿಯೋ ಸೇರಿಕೊಂಡಿದೆ. ನಂಬಿಯಣ್ಣನ ರಗಳೆಯಲ್ಲಿ 'ಮದದಾನೆ' ಬಂದು ನಂಬಿ-ಬಾಲಕನಿದ್ದ ಕಿರುಬಂಡಿಯನ್ನು ಪ್ರದಕ್ಷಿಣೆ ಮಾಡಿ ಅವನಿಗೆ ನಮಿಸಿ ಹೋದ ಸಂಗತಿ ಪೆರಿಯಪುರಾಣದಲ್ಲಿಲ್ಲ ನಂಬಿಯಣ್ಣನ ಆಪ್ತಸಖನಾಗಿ, ಮಂತ್ರಿಯಾಗಿ, ಸಚಿವನಾಗಿ ಇರುತ್ತಿದ್ದ ತುಂಬುರನ ವೃತ್ತಾಂತವಿಲ್ಲ. ನಂಬಿಯಣ್ಣನು ಗಜ್ಜುಗದಾಟದ ಮೂಲಕವೂ ಶಿವಪೂಜೆ ಮಾಡುತ್ತಿದ್ದುದು ಶೇಕ್ಕಿಳಾರನಿಗೆ ಗೊತ್ತಾಗಿಲ್ಲ; ಹರಿಹರನಿಗೆ ಗೊತ್ತು. ಇಂತಹ ಇನ್ನೆಷ್ಟೋ ಸನ್ನಿವೇಶಗಳು 'ರಗಳೆ'ಯಲ್ಲಿವೆ. 'ಪುರಾಣ'ದಲ್ಲಿಲ್ಲ. ಅಲ್ಲಿರುವ ಎಷ್ಟೋ ಸಂಗತಿಗಳು 'ರಗಳೆ'ಯಲ್ಲಿಲ್ಲ. ಆದುದರಿಂದ ಇವರಿಬ್ಬರೂ ಒಂದೇ ಮೂಲದಿಂದ ವಿಷಯ ಸಂಗ್ರಹ ಮಾಡಿರುವುದರ ಜೊತೆಗೆ, ತಮತಮಗೆ ದೊರೆತ ಬೇರೆ ಬೇರೆ ಮೂಲಗಳನ್ನೂ ನೋಡಿರುವರೆಂದು ಊಹಿಸಬಹುದು.

ಹರಿಹರನ ರಗಳೆಗಳಲ್ಲಿ ತಿರುತೊಂಡರ್, ತಿರುಅಂದಾದಿಯ ಅನೇಕ ಪದಗಳು ಕಂಡುಬರುವುದರಿಂದ, ಹರಿಹರ ಈ ಎರಡೂ ಕೃತಿಗಳನ್ನೂ ಆಧಾರವಾಗಿಟ್ಟುಕೊಂಡು ಕಥೆಗಳಲ್ಲಿ ಮಾರ್ಪಾಡು ಮಾಡಿಕೊಂಡಿರಬೇಕೆಂದು ಕಾಣುತ್ತದೆ.

"ಹರಿಹರನ ರಗಳೆಗಳನ್ನು ಪರಿಶೀಲಿಸಿದಲ್ಲಿ ವಚನಗಳಿಗೂ ರಗಳೆಗಳಿಗೂ ಇರುವ ಜನ್ಯಜನಕ ಸಂಬಂಧ ಬಗೆಬಗೆಯಾಗಿ ಹೊಳೆಯು ತ್ತದೆ".[೧೨] ಎಂದು ವಿ.ಚಂದ್ರಶೇಖರ ನಂಗಲಿ ಅಭಿಪ್ರಾಯಪಡುತ್ತ ಕೆಲವು ಉದಾಹರಣೆ ಗಳನ್ನು ನೀಡಿದ್ದಾರೆ.

೧. ತಾ ನಡೆವಡೆ ನಡೆಗೆಟ್ಟ ನಡೆಯ ನಡೆಯಬೇಕು.
ತಾ ನುಡಿವಡೆ ನುಡಿಗೆಟ್ಟ ನುಡಿಯ ನುಡಿಯಬೇಕು ..........
ಕಾಲಿಲ್ಲದೆ ನಡೆಯುತ್ತಿದ್ದೆ, ಕಣ್ಣಿಲ್ಲದೆ ನೋಡುತ್ತಿದ್ದೆ ............

ಎಂಬ ಅಲ್ಲಮನ ವಚನಗಳ ಬೆಡಗಿನ ಕಥನವೇ ಕಾರಿಕಾಲಮ್ಮೆಯ ರಗಳೆ

೨. ರೂಪನೆ ಕಂಡರು ನಿರೂಪಣೆ ಕಾಣರು
ತನುವನೆ ಕಂಡರು ಅನುವನೆ ಕಾಣರು
ಆಚಾರವನೆ ಕಂಡರು ವಿಚಾರವನೆ ಕಾಣರು, ಗುಹೇಶ್ವರ
ನಿಮ್ಮ ಕುರುಹನೆ ಕಂಡು ಕೂಡಲರಿಯದೆ ಕೆಟ್ಟರು .........

ಎಂದು ಅಲ್ಲಮನ ವಚನದ ಬೆಳಕಿನ ಕಥನವೇ ಕಣ್ಣಪ್ಪದೇವರ ರಗಳೆ

---

೧೨. ಶಿವಾನಂದ ಎಸ್. ವಿರಕ್ತಮಠ (ಸಂ), ಹರಿಹರನ ರಗಳೆಗಳು – ಸಾಂಸ್ಕೃತಿಕ ಮುಖಾಮುಖಿ. ಪುಟ ೯೩-೯೪.

ನುಡಿಯೊಳಗಾಗಿ ನಡೆಯದಿದ್ದರೆ ಕೂಡಲಸಂಗಮ ದೇವನೆಂತೊಲಿ ವನಯ್ಯ? ಎಂಬ ಬಸವಣ್ಣನವರ ವಚನದ ಕಥನ ರೂಪವನ್ನಾಗಿಯೂ ತಿರುನೀಲಕಂಠರ ಚರಿತವನ್ನು ನೋಡಬಹುದು.

೨. 'ಮನವೆಲ್ಲ ನೀವೆ, ವನದೊಳಗಣ ದೇವ ತರುವೆಲ್ಲ ನೀವೆ, ತರುವಿನೊಳಗಾಡುವ ಖಗ ಮೃಗವೆಲ್ಲ ನೀವೆ, ಸರ್ವಭರಿತನಾಗಿ ಎನಗೇಕೆ ಮುಖ ತೋರೆ? ' - ಎಂಬ ಅಕ್ಕಮಹಾದೇವಿಯ ವಚನದ ಕಥನಗೀತೆಯಂತೆ ಆನಾಯನಾರ್ ರಗಳೆ ಮೂಡಿ ಬಂದಿದೆ. ವಚನಗಳಲ್ಲಿ ಪುರಾತನರ ಕಥೆಗಳ ಪ್ರಸ್ತಾಪ ಬಂದಿದೆಯಾದರೂ ಅದು ಕೇವಲ ಬಿಂದುರೂಪವಾಗಿದೆ: ವಿಸ್ತಾರವಾದ ಕಥೆ ಅಲ್ಲಿ ಸಿಕ್ಕುವುದಿಲ್ಲ. ವಿಷಯ ಸಂಗ್ರಹಣೆಗೆ ಆತ ತಮಿಳು ಸಾಹಿತ್ಯದ ಕಡೆಗೆ ನೋಡಬೇಕಾಯ್ತು ಎಂದು ಹೇಳಬಹುದು.

ಪುರಾತನರ ರಗಳೆಗಳು ಹಾಗೂ ಪೆರಿಯಪುರಾಣವನ್ನು ಹೋಲಿಸಿ ನೋಡಿದಾಗ, ಕಥೆ, ಪಾತ್ರಚಿತ್ರಣ, ವರ್ಣನೆ, ಸನ್ನಿವೇಷಗಳಲ್ಲಿ ಭಿನ್ನತೆಗಳಿರುವುದು ಗೋಚರಿಸುತ್ತವೆ. ಈ ಹಿನ್ನಲೆಯಲ್ಲಿ ಉದಾರಣೆಗೆ ಕೆಲವು ಪುರಾತನ ಕಥೆಗಳನ್ನು ಪರೀಶಿಲಿಸಿ ನಂತರ ನನ್ನ ಅಭಿಪ್ರಾಯವನ್ನು ತಿಳಿಸಲಾಗುವುದು.

ತಿರುನೀಲಕಂಠರ ರಗಳೆ

ಪೆರಿಯಪುರಾಣದ ಪ್ರಾರಂಭದಲ್ಲಿ ತಿರುನೀಲಕಂಠ ನಾಯನಾರರು ತಿಲ್ಲೆಯ ಕುಂಬಾರ ಕುಲದಲ್ಲಿ ಹುಟ್ಟಿಬಂದವರೆಂದೂ, ನಟರಾಜ ಸ್ವಾಮಿಯ ಪಾದಗಳನ್ನು ಸ್ತುತಿಸಿ ಸೇವೆ ಸಲ್ಲಿಸುವ ಶ್ರೇಷ್ಠರಾದವರೆಂದೂ ಹೇಳಿ ಮುಂದೆ ನೇರವಾಗಿ ಕಥೆ ಹೇಳಿಕೊಂಡು ಹೋಗಲಾಗಿದೆ. ಹರಿಹರ ಮೊದಲಿಗೆ ಚೋಳದೇಶದ ವರ್ಣನೆಯನ್ನು ಪುಟ್ಟದಾಗಿ ಮಾಡಿ ಅನಂತರ ಪೊನ್ನಾಂಬಲವನ್ನು ವರ್ಣಿಸುತ್ತಾನೆ.

..........................................ಮೆಱೆದುದು ಕರಂ
ಸಂತತಂ ಧರೆಗೆ ಪೊನ್ನಾಂಬಲಂ ಶಿವಪುರಂ
ಆ ಪುರದ ವಿಸ್ತರವನೇನೆಂಬೆನೀ ಧರೆಗೆ
ಕಾಪಾಲಿ ಸಂತತಂ ನೆಲಸಿಪ್ಪನದಱೊಳಗೆ
ಶಿವನಿಷ್ಠೆಯೇ ಕೋಂಟೆಯಾಗಿರ್ಪುದಾ ಪುರಕೆ
ಭವನ ಭಕ್ತಿಯೆ ಸಂದ ಕಾಹು ನೋಡಾ ಪುರಕೆ
ಗುಣ್ಪಿಱಿಯಬಾರದಾಚಾರವಗಳಾ ಪುರಕೆ
ಬಿಣ್ಪಿನಿಂದೊಪ್ಪುವಾಗಮವೆಯಾಳ್ವರಿಯದಕೆ
ಶಿವನನಾಮವೆ ನೆಗೆಲ್ದ ಬಿರುದಿನಟ್ಟಣೆಯದಕೆ
ಶಿವಪುರಾಣವೆ ಸವೆದ ಬಾಗಿಲುಗಳಾ ಪುರಕೆ
ನೆಲೆ ಸೋಮಸೂರ್ಯವೀಥಿಗಳಿಲ್ಲವಾ, ಪುರಕೆ
ಸಲೆ ಸಂದ ಶಿವವೀಥಿ ಹರವೀಥಿಯಾ ಪುರಕೆ (.ಪುಟ-೩ ಸಾಲು೧೭-೨೮)

ಪೆರಿಯಪುರಾಣದಲ್ಲಿ ತಿರುನೀಲಕಂಠರ ಪತ್ನಿಯ ಹೆಸರನ್ನು ಹೇಳಿಲ್ಲ. ರಗಳೆಯಲ್ಲಿ 'ಮುತ್ತೈದೆ' ಎಂದು ಹೇಳಲಾಗಿದೆ. ಪೆರಿಯ ಪುರಾಣದಲ್ಲಿ ತಿರುನೀಲಕಂಠರು ಮಣ್ಣಿನ ಪಾತ್ರೆಗಳನ್ನು ಮಾರಿ ಜೀವಿಸುತ್ತಿದ್ದರೆಂದು ಹೇಳಲಾಗಿದೆ. ರಗಳೆಯಲ್ಲಿ ಇದರ ಪ್ರಸ್ತಾಪವಿಲ್ಲ. ಪೆರಿಯಪುರಾಣದಲ್ಲಿ ತಿರುನೀಲಕಂಠರ ಲಿಂಗಾರ್ಚನೆಯ ವರ್ಣನೆಯಿಲ್ಲ. ರಗಳೆಯಲ್ಲಿ ವಿಸ್ತಾರವಾಗಿ, ಲಿಂಗಾರ್ಚನೆಯ ವರ್ಣನೆ ಮೂಡಿಬಂದಿದೆ.

ಪೂವಿನಿಂದೊಮ್ಮೆ ಪೊಸ ಪುಳಕದಿಂದೊಮ್ಮೊಮ್ಮೆ
ಭಾವದಿಂದೊಮ್ಮೆ ಭರಿತಾಶ್ರುದಿಂದೊಮ್ಮೊಮ್ಮೆ
ತೊದಲಿಂದಲೊಮ್ಮೆ ಗದುಗದುಕೆಯಿಂದೊಮ್ಮೊಮ್ಮೆ
ಮುದದಿಂದಲೊಮ್ಮೆ ಮುಗ್ಧತೆಯಿಂದಲೊಮ್ಮೊಮ್ಮೆ
ಧ್ಯಾನದಿಂದೊಮ್ಮೆ ಹರಹಾಸದಿಂದೊಮ್ಮೊಮ್ಮೆ
ಮೌನದಿಂದೊಮ್ಮೆ ಮನವೇಗದಿಂದೊಮ್ಮೊಮ್ಮೆ
ಅಕ್ರಮದೊಳೊಮ್ಮೆ ಪರಿವಿಡಿಯಿಂದಮೊಮ್ಮೊಮ್ಮೆ
ವಿಕ್ರಮದೊಳೊಮ್ಮೆ ಕರಗುತಲೊಮ್ಮೊಮ್ಮೆ (ಪುಟ-೪,ಸಾಲು೭೫-೮೨)

ಪೆರಿಯಪುರಾಣದಲ್ಲಿ, ನೀಲಕಂಠನಾಯನಾರರು ಒಬ್ಬ ವೇಶ್ಯೆಯೊಡನೆ ಸಹವಾಸ ಮಾಡಿ ಬರಲು ಅದನ್ನು ಸಹಿಸದ ಅವರ ಪತ್ನಿ, ಪ್ರಣಯ ಕೋಪದಿಂದ ಗಂಡನೊಡನೆ ಕೂಡಲು ಇಚ್ಛಿಸಲಿಲ್ಲ ಎಂದಿದೆ. ರಗಳೆಯಲ್ಲಿ ಲಿಂಗಾರ್ಚನೆ ಮಾಡಿ ಶಿವಾಲಯದಿಂದ ಮರಳಿ ಬರುತ್ತಿರುವಾಗ ಪುರದ ಬೀದಿಯ ಹರನೋಲಗದ ನಾಯಕಿಯ ವಿಳಾಸಿನಿಯೋರ್ವಳು ಹರಿಯಾಣವನ್ನು ತೊಳೆದ ನೀರನ್ನು ಮನೆಯ ಉಪ್ಪರಿಗೆಯ ಮೇಲಿನಿಂದ ಚೆಲ್ಲಿದಳು. ಆ ನೀರು ತಿರುನೀಲಕಂಠಕುಶವರ ಮೇಲೆ ಬೀಳಲು ಆಗ ಅವರು 'ತಿರುನೀಲಕಂಠಾ, ತಿರುನೀಲಕಂಠಾ' ಎಂದು ಉದ್ಗರಿಸಲು, ಆ ದನಿ ಕೇಳಿ ಬೆಚ್ಚಿ ಬಿದ್ದ ನಾಯಿಕಿ ಗಡಗಡನೆ ನಡುಗಿ ಉಪ್ಪರಿಗೆಯಿಂದ ದಡದಡನೆ ಇಳಿದುಹೋಗಿ ಅವರ ಕಾಲಿಗೆ ಬಿದ್ದು, ಅವರನ್ನು ತನ್ನ ಮಗೆಯೊಳಗೆ ಕರೆದೊಯ್ದು ಪರಿಮಳೋದಕದಿಂದ ಮಜ್ಜನ ಮಾಡಿಸಿ, ಹೊಸ ವಸ್ತ್ರಗಳನ್ನು ಹೊದಿಸಿ ದಿವ್ಯ ಗಂಧಗಳಿಂದ ಅನುಲೇಪನ ಮಾಡಿ, ಕರ್ಪೂರಮಿಶ್ರಿತ ವೀಳಯವನ್ನಿತ್ತು ಮಹಾಪರಾಧವನ್ನು ಮನ್ನಿಸಬೇಕೆಂದು ಬೇಡಿಕೊಂಡು, 'ದೇವ, ಮನೆಗೆ ದಯಮಾಡಿಸಿ' ಎಂದಳು.

ಅರ್ಧರಾತ್ರಿಯಲ್ಲಿ ಮನೆಗೆ ಮರಳಿದ ಪತಿಯ ಹೊಸಪರಿಯನ್ನು ಕಂಡ ಮುತ್ತೈದೆ, ಪತಿಯು ದಾರಿತಪ್ಪಿರುವನೆಂದು ಸಿಡಿಮಿಡಿಗೊಂಡಳು. ಎಂದಿನಂತೆ ಪತಿಸೇವೆಯನ್ನೇನೋ ಮಾಡಿದಳು, ಆದರೆ ಖಂಡುಗ ದುಃಖವನ್ನು ಮನದೊಳಗೆ ಹುಗಿದಿಟ್ಟು. ಆಕೆಯ ಮನಸ್ಸಿನಲ್ಲಿದ್ದ ಅಸಮಧಾನ ಬೇರೆ ರೂಪದಲ್ಲಿ ಕಾಣಿಸಿಕೊಂಡು ಈತನನ್ನು ಚಿಂತೆಗೀಡುಮಾಡಿತು. ಯಾವ ಪಾಪವನ್ನೂ ಅರಿಯದ ಆತನಿಗೆ

ಅದೊಂದೂ ಅರ್ಥವಾಗಲಿಲ್ಲ. ಸಿರಿಮಂಚದ ತುದಿಯಿಂಚಿನಲ್ಲಿ ಮುನಿಸಿಕೊಂಡು ಮಲಗಿದ್ದ ಮನದನ್ನೆಯಿನ್ನು ಮುಟ್ಟಲು ಕೈ ಚಾಚಿದನು. ಕೂಡಲೆ 'ಮುಟ್ಟಿದರೆ ಶಿವನಾಣೆ' ಎಂದು ಮತ್ತೈದೆ ಅವರ ಕೈಯಿನ್ನು ತಳ್ಳುವಳು.

ಪೆರಿಯಪುರಾಣದಲ್ಲಿ ಪತಿ ಪತ್ನಿಯನ್ನು ಮುಟ್ಟಲು ಹೋದಾಗ 'ನೀವು ನಮ್ಮನ್ನು ಮುಟ್ಟುವಿರಾದರೆ ತಿರುನೀಲಕಂಠರಾಣೆ' ಎಂದು ಆಣೆಯಿಡುವರು. ಇಲ್ಲಿ 'ನಮ್ಮನ್ನು' ಎಂಬ ಪದ ಯಾವ ಸ್ತ್ರೀಯರನ್ನೇ ಆಗಲಿ ಮುಟ್ಟಿದರೆ ತಿರುನೀಲಕಂಠನಾಣೆ ಎಂಬ ಅರ್ಥದಲ್ಲಿ ಆಕೆ ಆಣೆಯಿಟ್ಟುದ್ದು ಅರ್ಥಪೂರ್ಣವಾಗಿದೆ. (ಆಣೆಯಿಂತೆ ತಿರುನೀಲಕಂಠರು ಅಂದಿನಿಂದ ಯಾವ ಸ್ತ್ರೀಯನ್ನೂ ಸ್ಪರ್ಶಿಸಕೂಡದೆಂದು ಪ್ರತಿಜ್ಞೆ ತೊಟ್ಟರು)ರಗಳೆಯಲ್ಲಿ ತಿರುನೀಲಕಂಠರ ಪತ್ನಿ ತಮ್ಮನ್ನು ಮುಟ್ಟಬಾರದೆಂದು ಆಣೆ ಇಟ್ಟಂತೆ ಚಿತ್ರಿತವಾಗಿದೆ. ಪೆರಿಯಪುರಾಣದಲ್ಲಿ ಶಿವ ತನ್ನ ಭಕ್ತರನ್ನು ಲೋಕದವರರಿಯುವಂತೆ ಪ್ರಕಾಶಪಡಿಸಲು ಶಿವಯೋಗಿಯಾಗಿ ವೇಷ ಧರಿಸಿ ಬರುವನು. ರಗಳೆಯಲ್ಲಿ ತಿರುನೀಲಕಂಠ ದಂಪತಿಗಳ ಮನಸ್ಸನ್ನು ಒರೆ ಹಚ್ಚಿ ನೋಡುವನೆಂದು ಶಿವ-

ಹೂಸಿದ ವಿಭೂತಿ ಕೈಯೊಳು ಪಾತ್ರೆಯೆಸೆವ ಜಡೆ
ಭಾಸುರದ ಪುಲಿದೊವಲು ಲಾಕುಳಂ ಚೆಲುವ ನಡೆ
ಎಸೆವ ಭಿಕ್ಷುಕನವೇಷವನೊಪ್ಪೆ ಕೈಕೊಂಡು(ಪುಟ-೫, ಸಾಲು-೧೯೧-೧೯೩)

ಪೊನ್ನಾಂಬಲಕ್ಕೆ ಬರುವನು. ಶಿವನ ವೇಷ ವರ್ಣನೆ ಎರಡೂ ಕೃತಿಗಳಲ್ಲಿ ಭಿನ್ನವಾಗಿ ಬಂದಿದೆ. ಪೆರಿಯಪುರಾಣದಲ್ಲಿ ಶಿವ ನೀಲಕಂಠ ನಾಯನಾರರನ್ನು ಕುರಿತು 'ಈ ಭಿಕ್ಷೆಯೋಡು ತನಗೆ ಸಮಾನವಾದದ್ದು ಬೇರೊಂದನ್ನರಿಯದು. ಈ ಭೂಮಂಡಲದಲ್ಲಿ ತನ್ನೊಳಗೆ ಬಂದು ಸೇರಿದ ವಸ್ತುಗಳು ಯಾವುದನ್ನೇ ಆದರೂ ಪರಿಶುದ್ಧವಾಗಿ ಮಾಡುವುದು. ಇದನ್ನು ಹೊನ್ನಿಗಿಂತಲೂ ನವಮಣಿಗಳಿಗಿಂತಲೂ ಹೆಚ್ಚು ಎಚ್ಚರಿಕೆಯಿಂದ ಕಾಪಾಡಿಕೊಳ್ಳಬೇಕಾದದ್ದು ಈ ಗುಣಸ್ವಭಾವವುಳ್ಳದಿದು' ಎನ್ನುವನು. ರಗಳೆಯಲ್ಲಿ-

ಈ ಪಾತ್ರೆಯೆಮ್ಮ ಭಕ್ತರು ಕೊಟ್ಟ ಪದವಿಯಿದು
ಕಾಪಾಲಿಯಾದೊಡಂ ಬಯಸುವ ಸುವಸ್ತುವಿದು
ಬೇಡಿದುದನೀವುದು ಮಹಾಸಿದ್ಧಿಯುಳ್ಳುದಿದು
ಬೇಡದಿರ್ದುದನೀವುದೆಂತುಂ ವಿಚಿತ್ರವಿದು (ಪುಟ೬ ಸಾಲು ೨೨೧-೨೨೪)

ಎಂದು ಅದರ ಹಿರಿಮೆಯಿನ್ನು, ವೇಷಧಾರಿ ಶಿವ ತಿರುನೀಲಕಂಠರಿಗೆ ಹೇಳುವನು. ಪೆರಿಯಪುರಾಣದಲ್ಲಿ ಶಿವನಿಂದ ನೀಲಕಂಠನು ಓಡನ್ನು ಪಡೆದು ಭದ್ರವಾದ ಕಾಪಿರುವ ಒಂದು ಸ್ಥಳದಲ್ಲಿ ಇಟ್ಟರೆಂದು ಹೇಳಲಾಗಿದೆ. ರಗಳೆಯಲ್ಲಿ

ಸತಿಪತಿಗಳಿಬ್ಬರೂ ಪಾತ್ರೆಯನ್ನು ಪೆಟ್ಟಿಗೆಯಲ್ಲಿಟ್ಟು ಬಾಯಿಮುಚ್ಚಿ ಮುದ್ರಿಸಿ, ರಾತ್ರಿಯ ವೇಳೆ ತಮ್ಮಿಬ್ಬರ ಮಧ್ಯೆ ಇಟ್ಟುಕೊಂಡು, ಎಚ್ಚರಿಕೆಯಿಂದ ಕಾಯುತ್ತಿದ್ದರೆಂದು ಹೇಳಲಾಗಿದೆ. ಪೆರಿಯಪುರಾಣದಲ್ಲಿ ಓಡನ್ನು ಕೊಟ್ಟು ಹೋದ ಮೇಲೆ ಬಹಳ ದಿನ ಕಳೆದ ಬಳಿಕ ಪರಮೇಶ್ವರ ತನ್ನ ಲೀಲೆಯಿಂದ ಅದನ್ನು ಇಟ್ಟ ಜಾಗದಿಂದ ಮಾಯಿಮಾಡಿ ನೀಲಕಂಠನಾಯನಾರರ ಬಳಿಗೆ ಬರುವನು. ರಗಳೆಯಲ್ಲಿ ಗೊರವ ಮರುದಿನವೇ ಬಂದು ಕೊಟ್ಟ ಪಾತ್ರೆಯನ್ನು ಹಿಂತಿರುಗಿವಂತೆ ಒತ್ತಾಯಿಸುವನು. ಪಾತ್ರೆ ಕಾಣದಾದಾಗ ವೇಷಧಾರಿ ಶಿವ ತಿರುನೀಲಕಂಠರನ್ನು ಆಕ್ಷೇಪಿಸುವ ಭಾಗ ಎರಡೂ ಕೃತಿಗಳಲ್ಲಿ ಭಿನ್ನವಾಗಿದ್ದು ಪೆರಿಯಪುರಾಣಕ್ಕಿಂತ ರಗಳೆಯಲ್ಲಿ ಹೆಚ್ಚು ನಾಟಕೀಯತೆ ಕಂಡು ಬರುತ್ತದೆ.

ಪೆರಿಯಪುರಾಣದಲ್ಲಿ ವೇಷಧಾರಿ ಶಿವನನ್ನು ಕುರಿತು ನೀಲಕಂಠನಾಯನಾರರು ಓಡನ್ನು ಕದ್ದು ಮುಚ್ಚಿಟ್ಟುಕೊಂಡವನಲ್ಲ ನಾನು, 'ನನ್ನ ಮನಸ್ಸಿನಲ್ಲಿ ಕೂಡಾ ಕಳ್ಳತನದ ಭಾವವಿಲ್ಲವೆಂಬುದನ್ನು ನೀವು ಖಚಿತಮಾಡಿಕೊಳ್ಳುವುದಕ್ಕೆ ನಾನೇನು ಮಾಡಬೇಕು? ಬೇಗನೆ ಹೇಳಿ' ಎಂದು ಕೇಳುವರು. ಅದಕ್ಕೆ ಶಿವ 'ಪ್ರೀತಿ ಪಾತ್ರನಾದ ನಿನ್ನ ಮಗನನ್ನು ಹಿಡಿದುಕೊಂಡು ಕೊಳದಲ್ಲಿ ಮುಳುಗಿ ಹೊರಟು ಹೋಗು' ಎಂದು ಹೇಳುವನು. ಅದಕ್ಕೆ ನೀಲಕಂಠನಾಯನಾರರು 'ನೀವು ಅಪ್ಪಣೆಕೊಡಿಸಿದ ಪ್ರಕಾರವಾಗಿ ನಾನು ಸತ್ಯ ಮಾಡುವುದಕ್ಕೆ ನನಗೆ ಮಗನಿಲ್ಲ. ಏನು ಮಾಡಲಿ? ಹೇಳಿರಿ' ಎಂದು ಶಿವನನ್ನು ಕೇಳುವರು ಅದಕ್ಕೆ ಕಪಟ ವೇಷದ ಶಿವನು 'ನಿರ್ದೋಷವಾದ ಘನತೆಯಲ್ಲಿ ಶ್ರೇಷ್ಠಳಾದ ನಿನ್ನ ಮನೆಯವಳನ್ನು ಹಿಡಿದುಕೊಂಡು ದಟ್ಟವಾಗಿ ತುಂಬಿರುವ ಹೂಗಳಿಂದ ಶೋಭಿಸುವ ಕೊಳದಲ್ಲಿ ಹೊಕ್ಕು ಮುಳುಗಯ್ಯ' ಎಂದು ಹೇಳುವನು. ಇವಿಷ್ಟೂ ಮಾತುಕತೆ ನಡೆಯುವುದು ನೀಲಕಂಠನಾಯನಾರರ ಮನೆಯಲ್ಲೇ, ತಿಲ್ಲೆಯ ಬ್ರಾಹ್ಮಣರ ಮಹಾಸಭೆಯಲ್ಲಲ್ಲ. 'ತಮಗೂ ತಮ್ಮ ಪತ್ನಿಗೂ ನಡುವೆ ಉಂಟಾಗಿರುವ ಒಂದು ಶಪಥದಿಂದ ಜೊತೆಯಲ್ಲಿ ಮುಳುಗಲು ಸಾಧ್ಯವಿಲ್ಲ. ತುಂಬು ನೀರಿನಲ್ಲಿ ನಾನು ಮುಳುಗಿ ಸತ್ಯ ಮಾಡುತ್ತೇನೆ' ಎಂದು ನೀಲಕಂಠರು ನುಡಿದ ಮೇಲೆ ಕೆರಳಿದ ಕಪಟವೇಷಿ ಶಿವ 'ತಿಲ್ಲೆಯ ಬ್ರಾಹ್ಮಣರುಗಳ ಸಭೆಗೆ ಹೋಗಿ ಹೇಳುತ್ತೇನೆ ಎಂದು ಅಲ್ಲಿಗೆ ನಡೆಯಲು ದೊಡ್ಡತನವುಳ್ಳ ಮಹಾಭಕ್ತ ನೀಲಕಂಠರೂ ಅಲ್ಲಿಗೆ ಪೂರ್ಣ ಮನದಿಂದ ಶಿವ ಸ್ವರೂಪಿ ಬ್ರಾಹ್ಮಣನನ್ನು ಅನುಸರಿಸಿ ಹೋಗುವರು. ಸಭೆಯಲ್ಲಿ ಶಿವಯೋಗಿ ತನ್ನ ಅಹವಾಲನ್ನು ತೋಡಿಕೊಳ್ಳುವನು. ನೀಲಕಂಠರು ನಡೆದ ಸಂಗತಿಯನ್ನೆಲ್ಲಾ ಹೇಳುವರು. ತಿಲ್ಲೆಯ ಮೂರು ಸಾವಿರ ಬ್ರಾಹ್ಮಣರು ಮಡದಿಯೊಡನೆ ಕೊಳದಲ್ಲಿ ಮುಳುಗಿ ಪ್ರಮಾಣಿಸುವಂತೆ ಶಿವಯೋಗಿ ಕೇಳುತ್ತಿರುವುದು ನ್ಯಾಯವೇ ಎಂದು ಹೇಳುವರು.

ರಗಳೆಯಲ್ಲಿ, ಮಾಯಾವಿ ಗೊರವ ಬಗೆಬಗೆಯಾಗಿ ತಿರುನೀಲ ಕಂಠರನ್ನು ಆಕ್ಷೇಪಿಸಿ, ಚುಚ್ಚುನುಡಿದು, ನಿಂದಿಸಿ ನುಡಿದದ್ದಷ್ಟೇ ಅಲ್ಲದೆ, ಕೃತಕ ಕೋಪವನ್ನು ಧರಿಸಿ ಅಂಜಿಸುವ ದನಿಯಿಂದ 'ಶಿವದೋ' ಎಂದು, ಸುತ್ತ ನಿಂತ ಮಂದಿಗೆ ತೋರಿ ಎಗರಾಡಿ, ಬಂದವರಿಗೆ ದೂರಿ ಅಷ್ಟಕ್ಕೂ ಸುಮ್ಮನಾಗದೆ, ಇಲ್ಲಿ ಒದರಿದರೇನಾಗುತ್ತದೆ ಮೂವಾಯಿಲರು ಇದನ್ನು ಕಾಣಬೇಕು ಎಂದು ಕೈಯಲ್ಲಿ ಹುಲ್ಲು ಹಿಡಿದು, ಪೊನ್ನಾಂಬಲದ ಹಿರಿಯರಿರುವ ಮಂಟಪಕ್ಕೆ ಆ ದಂಪತಿ ಗಳೊಡನೆ ಬರುವನು. 'ತಿರುನೀಲಕಂಠರು ತಾನು ಕೊಟ್ಟ ಪಾತ್ರೆಯನ್ನು ಬಚ್ಚಿಟ್ಟುಕೊಂಡು ಹಿಂದಿರುಗಿಸುತ್ತಿಲ್ಲ' ಎಂದು ಸಭೆಯಲ್ಲಿ ಆಪಾದಿಸುವನು. ಗಂಡ-ಹೆಂಡಿರು ಸಭೆಗೆ ಇದ್ದುದನ್ನು ಇದ್ದಂತೆ ತಿಳಿಸುವರು. ಸಭೆಯವರೆಲ್ಲರೂ ತಿರುನೀಲಕಂಠರಿಗೆ ಬಂದೊದಗಿದ ವಿಪತ್ತಿಗೆ ಮರುಗಿ ಅದರಿಂದ ಅವರನ್ನು ಪಾರು ಮಾಡಲು ಎಲ್ಲರೂ ಒಂದೊಂದು ಹೊನ್ನನ್ನು ಕೊಟ್ಟು ಹೊನ್ನ ಪಾತ್ರೆ ಯೊಂದನ್ನು ಮಾಡಿಸಿಕೊಡುವುದೆಂದು ತೀರ್ಮಾನಿಸುವರು. ತಮ್ಮ ತೀರ್ಮಾನ ವನ್ನು ಸಭೆಯವರು ವೇಷಧಾರಿ ಶಿವನಿಗೆ ತಿಳಿಸಲು ಆತ ಅದಕ್ಕೊಪ್ಪದೆ-

ಅಕ್ಕಟಾ ಪುಣ್ಯಪಾಪದ ಹೊಲಬನಱಿಯರೇ
ಚಿಕ್ಕನಂತರವರಿಯದೀ ನುಡಿಯ ನುಡಿವರೇ
ಒಡಲಪ್ಪುದುಸುರಪ್ಪುದಾಯುವಪ್ಪುದು ಪಾತ್ರೆ
ತೊಡವಪ್ಪುದೆಮಗೆ ತವನಿಧಿಯಪ್ಪುದಾ ಪಾತ್ರೆ
----------------------------
ಅದಕೆ ಹೊನ್ನುಂ ಗಿನ್ನು ಸರಿಯೆಬೇಡಾ ಮಾತು
ಅದಕೆ ಪರುಸಂ ಗಿರುಸಂ ಓಹೋ ಬೇಡಾ ಮಾತು
(ಪುಟ-೮,ಸಾಲು ೬೬೬-೭೦)

ಎಂದು ಕೇಳಿ, ಹೊಡೆಯುವಂತೆ ಕೊಲುವಂತೆ ನಟಿಸಿ ಪಾತ್ರೇ ಪಾತ್ರೇ ಎಂದು ಕೂಗಿಡುವನು. ಕೊನೆಗೆ, ತಮ್ಮ ಮಡದಿಯೊಡನೆ ತಿರುನೀಲಕಂಠರು ಕೊಳದಲ್ಲಿ ಮುಳುಗಿ ಆಣೆ ಪೂರೈಸಿದರೆ ಸಾಕು ಎಂದು ನುಡಿಯುವನು.

ಹರಿಹರನು ತನ್ನ ಕಥೆಯಲ್ಲಿ ಮಗನ ಸುದ್ದಿಯನ್ನೇ ತಂದಿಲ್ಲ. ಕೊಳದ ಪ್ರಸ್ತಾಪ ಬರುವುದರಿಂದ ಮಗನನ್ನು ತರುವ ಅಗತ್ಯವಿಲ್ಲ ಎಂದು ಹರಿಹರನಿಗೆ ಅನ್ನಿಸಿ ಪುರಾಣದ ಮಗನ ಪ್ರಸ್ತಾಪವನ್ನು ತಂದಿಲ್ಲ. ಇಳೆಯಾಂಡ ಗುಡಿಮಾರನ ಕಥೆಯಲ್ಲಿ ಈ ಮಗನ ಪ್ರಸ್ತಾಪವನ್ನು ಹರಿಹರ ತಂದಿದ್ದಾನೆ. ಇಲ್ಲಿ ಹರಿಹರನ ಸೋಪಜ್ಞತೆಯನ್ನು ಕಾಣಬಹುದು.

ಪೆರಿಯಪುರಾಣದಲ್ಲಿ ಶಿವಯೋಗಿಯ ಅಭಿಮತವನ್ನು ತಿಲ್ಲೆಯ ಮೂರು ಸಾವಿರ ಬ್ರಾಹ್ಮಣರು ಸಮರ್ಥಿಸಿದಾಗ, ನೀಲಕಂಠನಾಯನಾರರು ತಮ್ಮ

ಧರ್ಮಪತ್ನಿಯನ್ನು ತಾವು ಮುಟ್ಟದಿರುವುದಕ್ಕೆ ಕಾರಣವನ್ನು ಅಲ್ಲಿ ಹೇಳಲೊಲ್ಲದೆ 'ಯೋಗ್ಯವಾದ ರೀತಿಯಲ್ಲಿ ಮುಳುಗಿ ಸತ್ಯ ಮಾಡಿಕೊಡುತ್ತೇನೆ ಬನ್ನಿ' ಎಂದು ಮುನಿಗಳೊಡನೆ ಸಭೆಯಿಂದ ಹೊರಟು ತಮ್ಮ ಮನೆಗೆ ಹೋಗುವರು. ತಮ್ಮ ಪತ್ನಿಯೊಂದಿಗೆ ತರುಪ್ಪುಲೀಶ್ವರ ದೇವಾಲಯದ ಮುಂದಿರುವ ಮೊಗ್ಗು ಮತ್ತು ಅರಳು ಹೂಗಳಿಂದ ತುಂಬಿದ; ತೋಪಿನಿಂದ ಸುತ್ತುವರಿದ ಕೊಳದ ಹತ್ತಿರ ಬಂದು, ವೇಣುದಂಡದ ಒಂದೊಂದು ತುದಿಯನ್ನು ಹಿಡಿದುಕೊಂಡು ಕೊಳಕ್ಕೆ ಪ್ರವೇಶ ಮಾಡಿದರು. ಅವರು ಹಾಗೆ ಮಾಡಿದಾಗ, ಶಿವಯೋಗಿಯು, 'ನಿಮ್ಮ ಪತ್ನಿಯ ಕೈ ಹಿಡಿದುಕೊಂಡು ಈರ್ವರೂ ಜೊತೆಗೂಡಿ ಮುಳುಗಿ ಎಂದನು. ಹಾಗೆ ಕೈಹಿಡಿದುಕೊಂಡು ಮುಳುಗುವುದು ಸಾಧ್ಯವಿಲ್ಲವೆಂಬುದಕ್ಕೆ ಕಾರಣವನ್ನು ಲೋಕದವರೆಲ್ಲಾ ಕೇಳುವಂತೆ ತಾವು ಹಿಂದೆ ಮಾಡಿದ್ದ ಶಪಥವನ್ನು ಎತ್ತಿಹೇಳಿ ಕೊಳದಲ್ಲಿ ಮುಳುಗಿದರು.

ರಗಳೆಯಲ್ಲಿ ತಿರುನೀಲಕಂಠರು ತಮ್ಮ ಹಾಗೂ ಪತ್ನಿಯ ನಡುವಿರುವ ಆಣೆಯನ್ನು ಸಭೆಗೆ ಹೇಳಲಾಗದೆ ತೊಳಲಾಡುವರು.

ಪಿಡಿಯೆನೆನ್ನಯ ಸತಿಯ ಕಯ್ಯನೇನಾದಡಂ
ಪಿಡಿಯೆನೀ ಧರೆ ಮೇಲೆ ಕೆಡೆದಡಂ ಸತ್ತಡಂ (ಪುಟ ೯, ಸಾಲು ೪೪೯-೪೫೦)

ಎಂದು ತಿರುನೀಲಕಂಠರು ನುಡಿದಾಗ "ಪೊಡವಿಗಿದು ಪೊಸತು ಪೊಸತೆನುತಲಾ ಶರಣ ಸಭೆ" ಆಶ್ಚರ್ಯಗೊಂಡಿತು. ಹುಸಿವೇಷದ ಗೊರವ ತಿರುನೀಲಕಂಠರನ್ನು ಮತ್ತಷ್ಟು ಕಟಕಿಯಿಂದ "ಕವಿಲೆಯಾಕಾರದ ಹುಲಿ"ಎಂದು ಚುಚ್ಚು ಮಾತಿನಿಂದ ಇರಿದನು, ಹೊಡೆಯುವಂತೆ ಬಡಿಯುವಂತೆ ನಟನೆ ಮಾಡಿದನು. ತಿರುನೀಲಕಂಠರು ಅವೆಲ್ಲವನ್ನೂ ಸಂತೋಷದಿಂದ ಸ್ವೀಕರಿಸಿದರು. ಭಕ್ತನ ನಿಷ್ಠೆಗೆ ದೇವನೇ ಸೋತನು. ಕೋಲೊಂದರ ಎರಡೂ ತುದಿಗಳನ್ನು ದಂಪತಿಗಳು ಹಿಡಿದುಕೊಂಡು ಕೊಳದಲ್ಲಿ ಮುಳುಗುವಂತೆ ಹುಷಿವೇಷದ ಗೊರವ ನುಡಿಯಲು

ದಡದಡಿಸುತ್ತೆದ್ದು ತಿರುನೀಲಕಂಠರ್ಬಂದು
ನುಡಿದಿರಿಂತಿದನೊಡಂಬಟ್ಟೆವಾವಿದನೆಂದು
ಸಂತಸಂ ಕೈಮಿಕ್ಕು ಗಂಡಹೆಂಡಿರು ನಲಿದು
ಕಂತುಹರ ಶರಣೆನುತೆ ಕೋಲ ತುದಿಯಂ ಪಿಡಿದು
ಇರಿಸಿದರಿವರು ಪಾತ್ರೆಯಂ ಕೊಳ್ಳೆವಾವದಂ
ಹರ ನೀನೆ ಬಲ್ಲೆ ತಾನೇನಾದುದೆಂಬುದಂ"

(ಪುಟ ೧೦, ಸಾಲು ೫೧೩-೫೧೮)

ಎನುತ ಕೊಳದಲ್ಲಿ ಮುಳುಗಿದರು.

ಪೆರಿಯಪುರಾಣದಲ್ಲಿ ಗಂಡಹೆಂಡಿರು ಕೊಳದಲ್ಲಿ ಮುಳುಗಿ ಮೇಲೇಳಲು, ಅವರ ಮುಪ್ಪು ಮಾಯವಾಗಿ ಎಳೆತನವನ್ನು ಪಡೆಯುವರು. ಶಿವಯೋಗಿ ಮಾಯವಾಗಿ ಆಕಾಶದಲ್ಲಿ ಉಮೆಯೊಡನೆ ವೃಷಭ ವಾಹನನಾಗಿ ಕಾಣಿಸಿಕೊಳ್ಳುವನು. ಪಂಚೇಂದ್ರಿಯಗಳನ್ನು ಗೆದ್ದ ಆ ದಂಪತಿಗಳಿಗೆ ಉಮಾಪತಿ ನಿತ್ಯ ಯೌವನವನ್ನು ಅನುಗ್ರಹಿಸಿ ಅಂತರ್ಧಾನನಾಗುವನು. ರಗಳೆಯಲ್ಲಿ ಕೋಲಿನ ಎರಡೂ ತುದಿಗಳನ್ನು ಹಿಡಿದು ಕೊಳದಲ್ಲಿ ಮುಳುಗಿ ಮೇಲೆದ್ದ ದಂಪತಿಗಳಿಗೆ ಹದಿನಾರರ ಹರೆಯ ಪ್ರಾಪ್ತವಾಯಿತು. ಜಗಳದ ಗುರುಗಳು ತಾವು ಧರಿಸಿದ್ದ ಚೋಹವನ್ನು ತೆಗೆದು ನಿಜವೇಷ ತೋರಿದರು. ತಮ್ಮನ್ನು ಪರೀಕ್ಷಿಸಲು ಶಿವ ಪಟ್ಟ ಶ್ರಮಕ್ಕಾಗಿ ದಂಪತಿಗಳು ಮರುಗುವರು. ಪುಷ್ಪವೃಷ್ಟಿಯಾಗುವುದು. ಶಿವ ನಂದಿಗೆ ತನ್ನ ಭಕ್ತನ ನಿಷ್ಠೆಯನ್ನು ಪರಿಚಯಿಸುವನು. ಮುಂದಿದ್ದ ತಿರುನೀಲಕಂಠರನ್ನು ನೋಡಿ

ಆಣೆ ಬಿಟ್ಟುದು ಬಿಟ್ಟುದಿನ್ನಿನಿತು ವತ್ಸರಂ
ಕ್ಷೋಣೀತಳದೊಳು ಸುಖದಿಂದಿರ್ದನಂತರ
(ಪುಟ ೧೦, ಸಾಲು ೫೫೭-೫೫೮)

ಬನ್ನಿ ಎಂದು ಹೇಳಿ, ಅಷ್ಟು ದಿವಸ ಅವರನ್ನು ಭುವಿಯಲ್ಲಿರಿಸಿ ಅನಂತರ ಉತ್ಸವದಿಂದ ಅವರನ್ನು ಮನ್ನಿಸಿ ಕೈಲಾಸಕ್ಕೆ ಕರೆದೊಯ್ದು ಗಣಪದವಿಯಲ್ಲಿರಿಸುವನು.

ಇಹಃಪಗೆಯಾಂಡರ ರಗಳೆ

ಪೆರಿಯಪುರಾಣದ ಪ್ರಾರಂಭದಲ್ಲಿ ಪುಗಾರ್ ನಗರದ ಮುಂದಿರುವ ಪೊನ್ನಿ ಎಂಬ ಶ್ರೇಷ್ಠ ನದಿಯ ವರ್ಣನೆಯಿದೆ. ನದಿಯ ಪ್ರಸ್ತಾಪವೇ ರಗಳೆಯಲ್ಲಿಲ್ಲ. ಪೆರಿಯಪುರಾಣದ ಪ್ರಕಾರ ಇಯರ್ಪಗೈ ನಾಯನಾರರು ಪುಗಾರ್ ನಗರದ ವರ್ತಕರಲ್ಲಿ ಅಗ್ರಗಣ್ಯರು. ಅಪೂರ್ವದಾನಿಗಳು ಎಂದು ಚಿತ್ರಣಗೊಂಡಿದ್ದರೆ ರಗಳೆಯಲ್ಲಿ ಇಹಪಗೆಯಾಂಡರು ಕಾವೇರಿಕರೆ ಪಟ್ಟಣಾಧಿಪತಿ ಅವರ ಉದಾರತೆಯನ್ನು-

ತನ್ನ ಸಂಪನ್ನತೆ ಕುಬೇರನಿಂ ಶಾಶ್ವತಂ
ತನ್ನ ಶಿವಭಕ್ತಿ ಶರ್ವನ ಕರುಣದಿಂ ಪಿರಿದು
ತನ್ನುದಾರತೆ ಕರ್ಣಬಲಿಗಳಿಂದಂ ಪಿರಿದು (ಪುಟ ೧೧, ಸಾಲು ೧೦-೧೩)

ಎಂದು ದಾನಗುಣ ಸಂಪನ್ನತೆಯನ್ನು ಶಿವ ಉಪಮೆಗಳೊಂದಿಗೆ ವರ್ಣಿಸಿದ್ದಾನೆ. ಪೆರಿಯಪುರಾಣದಲ್ಲಿ ಕಥೆ ನೇರವಾಗಿ ಶಿವ ತನ್ನ ಭಕ್ತನನ್ನು ಪರೀಕ್ಷಿಸಲು ಧೂರ್ತವೇಷದ ಬ್ರಾಹ್ಮಣನಾಗಿ ಬಂದಂತೆ ಚಿತ್ರಿತವಾಗಿದೆ. ರಗಳೆಯಲ್ಲಿ

ಇಹಃ ಪಗೆಯಾಂಡರಿಗೆ ಅಂಗ-ಭೋಗದ ಸತಿಯರು ಇನ್ನೂರು ಮಂದಿ, ಸಿಂಗರಿಸುವ ಸತಿಯರು ನೂರು ಮಂದಿ ಇದ್ದು

ನನೆಯಿಂಬಿನಂ ತಿರ್ಪಳೊರ್ವಸತಿ ತನಗೆ ಮಿಗೆ
ಪೆಸರೆಸೆವ ಪತಿಹಿತವೆಯೆಂದೆಂಬ ನಾಮದಿಂ
ಪೊಸತೆನಿಪ ಲಾವಣ್ಯಮಂ ತಳೆದಳೊಪ್ಪದಿಂ
ಎನಿತು ವನಿತೆಯರಿರ್ದಡಂ ತಾರೆಗೆಗಳಂತೆ
ಮಿನುಮಿನುಗುತಿರ್ಪರಾ ಚಂದ್ರವದನೆಯ ಮುಂತೆ
ನೆನೆವ ಮನದೀವ ಕಯ್ಯೆನಿಸಿರ್ಪಳಾತಂಗೆ
ತನಿನೇಹದಿಂ ಹರಣವಾಗಿರ್ಪಳಾತಂಗೆ (ಪುಟ ೧೧, ಸಾಲು ೧೬-೨೨)

ಎಂದು ವರ್ಣಿಸಲಾಗಿದೆ. ಪೆರಿಯಪುರಾಣದಲ್ಲಿ ಇಯರ್‌ಪಗೈ ನಾಯನಾರರು ಮಹಾಶ್ರೀಮಂತರೆಂದು ಶಿವಸ್ವರೂಪಿಗಳಾದ ಜಂಗಮರು ಏನೇ ಬೇಡಲಿ ಅದನ್ನು ತಕ್ಷಣ ಕೊಡುವ ಸ್ವಭಾವದವರೆಂದು ವರ್ಣಿಸಲಾಗಿದೆ. ರಗಳೆಯಲ್ಲಿ ಇಹಃಪಗೆಯಾಂಡರ ಜಂಗಮ ಪ್ರೇಮ ಹಾಗೂ ಸೇವೆಯನ್ನು ಕವಿ ವಿಸ್ತಾರವಾಗಿ ವರ್ಣಿಸಿರುವನು. ಅರುವತ್ತು ವರ್ಷ ಹೀಗೆಯೇ ಶರಣರ ಸೇವೆ ಮಾಡಿದರೆಂದು ಹೇಳಲಾಗಿದೆ.

ಪೆರಿಯಪುರಾಣದಲ್ಲಿ ಶಿವ ಧೂರ್ತವೇಷದ ಬ್ರಾಹ್ಮಣನ ವೇಷಧರಿಸಿ ಭಕ್ತರು ಕೇಳಿದ್ದನ್ನು ಇಲ್ಲವೆನ್ನದ ಇಯರ್‌ಪಗೈರ ದಾನಗುಣವನ್ನು, ಭಕ್ತಿಯ ಸ್ವರೂಪವನ್ನು ಲೋಕಕ್ಕೆ ತೋರಿಸುವ ಉದ್ದೇಶದಿಂದ ಬಂದನು. ರಗಳೆಯಲ್ಲಿ ಇಹಃಪಗೆ ಯಾಂಡರ–

......... ಇಲ್ಲೆನ್ನದ ಬಿರುದನಱಿವೆ ನಾನೆಂದು
ಭೂತೇಶ್ವರಂ ಮನವನೊರೆದು ನೋಡುವೆನೆಂದು
(ಪುಟ ೧೨, ಸಾಲು ೮೧-೮೨)

ಚೆಲುವಿನ ರೂಪವನ್ನು ಧರಿಸಿ ಧರೆಗಿಳಿದು ಬಂದನು. ಈ ಮನ್ಮಥ ಸುಂದರನ ಯೌವ್ವನ ಪಟ್ಟಣದವರ ಮೇಲೆ ಬೀರಿದ ಪ್ರಭಾವಗಳ ವರ್ಣನೆ ಕೆಳಗಿನಂತೆ ವಿಸ್ತಾರವಾಗಿ, ಮನೋಜ್ಞವಾಗಿ ಬಂದಿದೆ.

......... ಬರೆ ಪುರದೊಳೆಲ್ಲ ಜವ್ವನಗಾಳಿ ತೀಡಿತ್ತು
ವರ ನಾರಿಯರ ಚಿತ್ತಮಂ ಸೋಂಕಿ ತಿರುಗಿತ್ತು
ಎವೆಯಿಕ್ಕದಲ್ಲಲ್ಲಿ ನೋಡುತಿಪ್ಪರ್ಕೆಲರು
ತವತವಗೆ ತೋರಿ ಮಾತಾಡುತಿಪ್ಪರ್ಕೆಲರು
ಈ ಕಂಗಳೀ ನೋಟದೀ ಹರೆಯವಿನ್ನೆಂತು
ಲೋಕಕ್ಕಿದಚ್ಚರಿಯ ರೂಪು ಸುಳಿಯುತ್ತಿಂತು

--------------------------

ಸೋಜಿಗದ ಸುಕುಮಾರನೀ ಬಂದನೆಲಗವ್ವ

ಮೂಜಗದ ಜವ್ವನಿಗನೀ ಬಂದನೆಲಗವ್ವ

------------------------

ನಡೆದಡೆ ನಡೆದ ಹೆಜ್ಜೆಯಿಂ ಸೋಂಕಿ ನಡೆ ನಡೆದು

ಪುಳುಕಿಸುತೆನುಡಿಯಲಾ ಸದಿಗೇಳ್ದ ಕಿವಿಗೆ ಮಾಱೂಗುತ್ತೆ

(ಪುಟ ೧೨, ಸಾಲು ೧೧೪-೩೦)

ಪೆರಿಯಪುರಾಣದ ಪ್ರಕಾರ ಮಾಯಾಕಾರದ ಬ್ರಾಹ್ಮಣನು 'ಸ್ಥಿರವಾದ ಪ್ರೇಮವುಳ್ಳ ನಿನ್ನ ಹೆಂಡತಿಯನ್ನು ಬಯಸಿ ನಾವಿಲ್ಲಿಗೆ ಬಂದಿರುವುದು' ಎಂದು ತನ್ನ ಆಗಮನದ ಕಾರಣವನ್ನು ಹೇಳುವನು. ರಗಳೆಯಲ್ಲಿ ಸುಂದರ ವೇಷದ ಶಿವ ಭಕ್ತನನ್ನು 'ದೇವಾರ್ಚನೆಗೆ ವನಿತೆಯೊರ್ವಳನೀವುದಾ ಪರಿಚರಿಯದೆಡೆಗೆ ಸೊಬಗೆಯಿಂ ಮುಗುದೆಯಿಂ ಸದುಗುಣಾಭರಣೆಯಿಂ ಅಬಲೆಯಿಂ ಪತಿಹಿತವೆ ಯಿಂ ಸುಖಾವರಣೆಯಿಂ ಹರುಷದಿಂದೀವುದು' ಎಂದು ಕೇಳುವನು.

ಪೆರಿಯಗಪುರಾಣದಲ್ಲಿ ಬ್ರಾಹ್ಮಣನ ಬಯಕೆಯನ್ನು ಕೇಳಿ ವಿಶೇಷವಾಗಿ ಸಂತೋಷ ಹೊಂದಿ 'ಈ ರೀತಿ ನೀವು ನನ್ನಲ್ಲಿ ಮೊದಲೇ ಇರುವುದನ್ನೇ ಬಯಸಿ ಕೇಳಿದ್ದು, ಸ್ವಾಮೀ ನೀವು ನನಗೆ ತಂದುಕೊಟ್ಟ ಪರಮಭಾಗ್ಯ' ಎಂದು ನುಡಿದನು. ತಕ್ಷಣವೇ ಒಳಗೆ ಹೋಗಿ ತಮ್ಮ ಪ್ರಿಯ ಪತ್ನಿಯನ್ನು ಕುರಿತು 'ವಿಧಿ ಪ್ರಕಾರವಾಗಿ ಮದುವೆ ಮಾಡಿಕೊಂಡಿರುವ ಕುಲಮಡದಿಯೇ, ಇಂದು ನಿನ್ನನ್ನು ಈ ನಿಜ ತಪಸ್ವಿಗಳಿಗೆ ನಾನು ಕೊಟ್ಟು ಬಿಟ್ಟೆನು' ಎಂದು ಹೇಳುವರು. ರಗಳೆಯಲ್ಲಿ ಹುಸಿವೇಷದ ಶಿವನ ಬಯಕೆಯನ್ನು ಪೂರೈಸಲು ಇಹಃಪಗೆಯಾಂಡರು ತಮ್ಮಲ್ಲಿರುವ ಇನ್ನೂರು ಮಂದಿ ವಿಳಾಸಿನಿಯರನ್ನೂ ನೂರ್ವರು ಮಂದಿ ರಾಣಿ ವಾಸದವರನ್ನು ಕರೆಯಿಸಿ ತೋರಿಸುವನು. ಅವರಾರನ್ನೂ ಒಪ್ಪದ ಶಿವ; ಪತಿಹಿತವೆಯನ್ನು ಒಪ್ಪುವನು. ಪೆರಿಯಪುರಾಣದಲ್ಲಿ ಇಯರ್‌ಪಗ್ಯೆ ನಾಯನಾರಾರರು ತಮ್ಮ ಪತ್ನಿಯವರನ್ನು ಕುರಿತು 'ನಿನ್ನನ್ನು ಈ ನಿಜ ತಪಸ್ವಿಗೆ ನಾನು ಕೊಟ್ಟು ಬಿಟ್ಟೆನು' ಎನ್ನಲು ಅವರ ಪತ್ನಿಗೆ ಆ ಮಾತು ಕೇಳಿ ಮನಕಲಕಿ ಬಳಿಕ ಮನಸ್ಸು ತಿಳಿಯಾಗಿ ಪತಿಯ ಆಜ್ಞೆಗೆ ಶಿರಬಾಗಿ ತಮ್ಮನ್ನು ಅರ್ಪಿಸಿಕೊಳ್ಳಲು ಮುಂದಾಗುವರು. ಈ ಸನ್ನಿವೇಶ ಪೆರಿಯಪುರಾಣದಲ್ಲಿ ವಾಸ್ತವವಾಗಿ ಬಂದಿದೆ. ರಗಳೆಯಲ್ಲಿ ಮೇಲಿನಂತಿಲ್ಲ. ಪತಿಯುಚಿದ ವಿಷಯ ತಿಳಿದ ತಕ್ಷಣ ಇಹಃಪಗೆಯಾಂಡರ ಪತ್ನಿ ಹಿಂದೆ ಮುಂದೆ ನೋಡದೆ ಒಪ್ಪಿಕೊಳ್ಳುವಂತೆ ಚಿತ್ರಣವಾಗಿದೆ. ಆಕೆಯ ಮನಸ್ಸಿನಲ್ಲುಂಟಾದ ತಾಕಲಾಟಗಳ ಬಗ್ಗೆ ಹೇಳಿಲ್ಲ. ಪೆರಿಯಪುರಾಣದ ಪ್ರಕಾರ ಮಡದಿಯನ್ನು ಕೊಟ್ಟ ಇಹಃಪಗೆಯಾಂಡರು ತಾವೇ ಮೊದಲು 'ಸ್ವಾಮಿ ನಾನು ಮಾಡಬೇಕಾಗಿರುವ ಸೇವೆ ಯಾವುದು? ' ಎಂದು ಕೇಳಲು ಅದಕ್ಕೆ ಪ್ರತಿಯಾಗಿ ವೇಷಧಾರಿಯಾದ ಬ್ರಾಹ್ಮಣ 'ಈ

ಸುಂದರಿಯನ್ನು ನಾನು ಒಬ್ಬೊಂಟಿಗನಾಗಿ ಕರೆದುಕೊಂಡು ಹೋಗ ಬೇಕಾಗಿರುವುದರಿಂದ, ನಿಮ್ಮಲ್ಲಿ ಪ್ರೀತಿಯಿಟ್ಟಿರುವ ಬಂಧು-ಬಳಗದವರನ್ನು ಈ ಊರನ್ನು ದಾಟಿ ಹೋಗುವುದಕ್ಕೆ ನೀನು ಸಹಾಯಕನಾಗಿ ಬರಬೇಕು' ಎನ್ನುವನು. ರಗಳೆಯಲ್ಲಿ ಶಿವ ಈ ರೀತಿ ಕೇಳುವುದೇ ಇಲ್ಲ. ವಿಟವೇಷದ ಶಿವ ಪತಿಹಿತವೆಯನ್ನು ಇಹಃಪಗಡೆಯಾಂಡರಿಂದ ಪಡೆದವನು ತಡಮಾಡದೆ ಅವಳೊಡನೆ ನಡೆಯುವನು.

ಪೆರಿಯಪುರಾಣದಲ್ಲಿ ಇಯರ್ಪಗೈ ನಾಯನಾರರು ಶಿವನಿಗೆ ರಕ್ಷಣೆ ನೀಡಲು ಕೈಯಲ್ಲಿ ಕತ್ತಿಯನ್ನೂ ಹಲಗೆಯನ್ನೂ ಹಿಡಿದು ತಾವೇ ಮುಂದೆ ನಡೆಯುವರು. ಬ್ರಾಹ್ಮಣನೊಬ್ಬನು ಇಯರ್ಪಗೈನಾಯನಾರರ ಪತ್ನಿಯನ್ನು ಕರೆದುಕೊಂಡು ಹೋಗುತ್ತಿರುವುದನ್ನು ಕಂಡು ಅವರ ಬಂಧುಗಳು ತಡೆಯುವರು. ಹಾಗೆ ತಡೆದವರೊಂದಿಗೆ ಇಯರ್ಪಗೈನಾಯನಾರರು ಯುದ್ಧಮಾಡಿ ಗೆಲ್ಲುವರು.

ರಗಳೆಯಲ್ಲಿ ಪುರಜನರು-

ಮಿಂಡನೊಡನೊಡನೆ ಪತಿಹಿತವೆ ನೋಡದ್ಭುತಂ
ಆವನೆಂದಱಿಯೆಂ ಮರುಳ್ಮಾಡುತೀ ಹೋದ
ಓವೋವೊ ನೋಡಿ ಹಪಗೆಯಾಂಡರೇನಾದ
ಇಂತು ಕೊಟ್ಟವರುಂಟೆ ಈ ಸೌಕುಮಾರಿಯಿಂ
ಕಂತು ನೆಱೆ ಬಯಿಸಿ ಪಡೆವನೆ ಸುಖಾಕಾರಿಯಿಂ
ಹಾಸಿಂದಲಿಳಿಯದಳ ಬೀದಿಯೊಳ್ಬರಿಸಿದಂ
ನೇಸಱಂ ಕಾಣದಳನೀ ಬಿಸಿಲೊಳಿರಿಸಿದಂ
ಘಾಸಿಯಾದುದು ನೋಡ ಪತಿಹಿತವೆಯರ ಕುಲಂ
ಬೀಸರಂಬೋದುದಿನ್ನೇನು ವಂಶದ ಛಲಂ

(ಪುಟ೧೩೩, ಸಾಲು ೨೦೪-೨೧೨)

ಎಂದು ನುಡಿಯಲು ಅದನ್ನು ಕೇಳಿದ ಪತಿಹಿತವೆ ವಿಶೇಷವಾಗಿ ಕೋಪಗೊಂಡು 'ಸದಾ ನಿಮಗೆ ಶಿವಭಕ್ತಿ ಆಗದಿರಲಿ' ಎಂದು ಮುನ್ನಡೆಯುವಳು. ಪುರಜನರ ಆಕ್ರೋಶ ಅವಳ ಬಂಧುಗಳಿ ಮುಟ್ಟಿ, ಅವರು ಕೆರಳಿ ಯುದ್ಧ ಮಾಡಲು ಚತುರಂಗ ಬಲದೊಂದಿಗೆ ಬರುವರು.

ಪೆರಿಯ ಪುರಾಣದಲ್ಲಿ ಇಯರ್ಪಗೈ ನಾಯನಾರರನ್ನು ಇದಿರಿಸಲು ಬಂದ ಬಂಧುಗಳ ಗುಂಪನ್ನು ಕಂಡು ಶಿವರೂಪಿ ಮುನಿ ಅಂಜಿದವನ ಹಾಗೆ ನಟಿಸುವನು. ಆಗ ಪತಿಹಿತವೆಯು 'ಸ್ವಾಮಿ, ಅಂಜಬೇಡಿ ಇಯರ್ಪಗೈ ಗೆಲ್ಲುವರು' ಎಂದು ಅವನನ್ನೂ ಸಮಾಧಾನಿಸುವಳು. ರಗಳೆಯಲ್ಲಿ ಚತುರಂಗ ಬಲವನ್ನೂ ಅವರ ಆರ್ಭಟವನ್ನೂ ನೋಡಿ ವಿಟಜಂಗಮನು-

ಬೇಡ ನಿನ್ನಳವಲ್ಲವಂದಿರ ಬಲಂ ಪಿರಿದು
ನೋಡೆ ನೀನೊರ್ವನಾ ಬಲವಂ ಗೆಲುವುದರಿದು

(ಪುಟ ೧೪,ಸಾಲು ೨೭೧-೨೭೨)

ಎಂದು ಇಹಃಪಗೆಯಾಂಡರಿಗೆ ಹೇಳುವನು.

ಪೆರಿಯಪುರಾಣದಲ್ಲಿ ಸಂಕ್ಷಿಪ್ತವಾಗಿ ಯುದ್ಧ ವಿವರ ಬಂದಿದ್ದರೆ ರಗಳೆಯಲ್ಲಿ ಸ್ವಲ್ಪ ವಿಸ್ತಾರವಾಗಿ ಬಂದಿದೆ. ಪೆರಿಯಪುರಾಣದಲ್ಲಿ ಇಯರ್ಪ್ಪಗೈ ನಾಯನಾರರು ತಮ್ಮನ್ನು ತಾಗಿ ಬಂದ ವೀರರನ್ನೆಲ್ಲಾ ಧ್ವಂಸ ಮಾಡಿ ಶಿವರೂಪಿ ಮುನಿಯನ್ನು ಕುರಿತು 'ಸ್ವಾಮಿಗಳೇ, ನೀವು ಅಂಜಿಕೊಳ್ಳದ ಹಾಗೆ ಎಣೆಯಿಲ್ಲದ ಈ ಕಾಡನ್ನು ದಾಟಿಸಿಬಿಟ್ಟು ಬರುತ್ತೇನೆ' ಎಂದು ಜೊತೆಯಲ್ಲೇ ಹೋಗುವರು. ಹಾಗೆ ನಡೆದು ಪೂಂಪುಗಾರ್ ನಗರದ ಹತ್ತಿರವಿರುವ ಸ್ಮಶಾನದ ಬಳಿ ಬರಲು ಶಿವರೂಪಿ ಬ್ರಾಹ್ಮಣ ನಾಯನಾರರನ್ನು 'ಇನ್ನು ನೀವು ಹಿಂತಿರುಗಿ' ಎಂದು ಹೇಳುವನು. ಇಯರ್ಪ್ಪಗೈ ನಾಯನಾರರು ಆ ಬ್ರಾಹ್ಮಣನನ್ನು ಸ್ತುತಿಸಿ ತಮ್ಮ ಮನೆಗೆ ಹಿಂತಿರುಗಿದರು. ಹಿಂದಿರುಗಿಯೂ ನೋಡದೆ ಹೊರಟು ಹೋದ ಪರಿಶುದ್ಧ ಮನದ ತಮ್ಮ ಭಕ್ತನ ನಿಷ್ಠೆಗೆ ಮೆಚ್ಚಿ ಶಿವ ಇಯರ್ಪ್ಪಗೈ ನಾಯನಾರರನ್ನು ಕರೆಯುವನು. ಆ ಕರೆ ಕೇಳಿ ಮರಳಿ ಬಂದ ಇಯರ್ಪ್ಪಗೈಗೆ ಶಿವ ನಿಜರೂಪುದೋರಲು ಮಾಯವಾಗುವನು. ಉಮೆಯೊಡನೆ ಆಗಸದಲ್ಲಿ ಕಾಣಿಸಿಕೊಳ್ಳುವನು. ಸಾಷ್ಟಾಂಗ ನಮಸ್ಕಾರ ಮಾಡಿದ ಭಕ್ತನನ್ನೂ ಶಿವ ಸತಿಯೊಡನೆ ಕೈಲಾಸಕ್ಕೆ ಬರುವಂತೆ ಆಹ್ವಾನಿಸಿ, ಶಾಶ್ವತ ಸುಖವನ್ನು ಆ ಭಕ್ತ ದಂಪತಿಗಳಿಗೆ ಅನುಗ್ರಹಿಸುವನು. ರಗಳೆಯಲ್ಲಿ ಚತುರಂಗ ಬಲವನ್ನೆಲ್ಲಾ ಸಂಹರಿಸಿ ಶಿವಭಕ್ತನಿದ್ದೆಡೆಗೆ ಉತ್ಸವದಿಂದ ಇಹಃಪಗೆಯಾಂಡರು ಬಂದು 'ದೇವಾಯಿ ನ್ನಾವುದುಂ ಭಯಮಿಲ್ಲ ನಡೆಯಿಯೆನೆ' ಎನ್ನಲು ಅದಕ್ಕೆ ಶಿವರೂಪಿ ವಿಟನು

..............................................ಮಗನೆ
ನೊಂದಾ ಬಳಲ್ದ ಕಂದಾ ಹೋಗಲಕ್ಕುಮೇ
ಮುಂದಾರುಯಿಲ್ಲಲೇ ಸುಯಿಧಾನವಕ್ಕುಮೇ
ನೋಡುತಿರು ನೀನಿನಿತು ಬೇಗವೆನುತಂ ನಡೆದು
ನಾಡೆ ಮನದೊಳಗೆ ಬೆರಗಾಗಿ ರಾಗಂ ಬಡೆದು
ಇಲ್ಲಿಂದ ಮೇಲಿನ್ನು ಕಾಡಲೆನ್ನಳವಲ್ಲ
ಬಲ್ಲಿದನಿಹಃ ಪಗೆಯ ನೋಸರಿಸುವವನಲ್ಲ
ಎನುತೆ ಕಾಬಳತೆಯೊಳು ನಿಂದು ಶಶಿಧರನಲ್ಲಿ

(ಪುಟ ೧೬, ಸಾಲು ೩೭೧-೩೭೮)

ತನ್ನ ನಿಜರೂಪವನ್ನು ಪತಿಹಿತವೆಗೆ ತೋರುವನು. ಶಿವರೂಪು ಕಂಡು ಮುದಗೊಂಡು ಪತಿಹಿತವೆ 'ಇಹಃಪಗೆಯಾಂಡ ಬಾ ಬಾರ ಅತಿಕರಂಲೇಸಾಯ್ತು ಬಾರ ಎಲಲೇ ಬಾರ' ಎಂದು ಪತಿಯನ್ನು ಕರೆಯುವಳು. ಸತಿಯ ಕೂಗು ಕೇಳಿ

ಆತ 'ಅದಾವವನಡ್ಡವಾಯ್ದನೆಲೆಲೇ ಎನುತೆ' ಕೋಪಗೊಂಡು ಬರುವನು. ಪತಿಹಿತವೆ ಗಂಡನಿಗೆ 'ನೋಡ ದೇವರಿವರೆ' ಎಂದು ಸಂಭ್ರಮದಿಂದ ನುಡಿಯಲು ಅದಕ್ಕೆ ಇಯಃಪಗೆಯಾಂಡರು- 'ಮರುಳೆ ಮುನ್ನಾರೆಂದು ಕೊಟ್ಟೆನು' ಎಂದು ನುಡಿಯುವನು. ಶಿವ ತನ್ನ ಭಕ್ತರ ನಿಷ್ಠೆಗೆ ಮೆಚ್ಚಿ ಅವರನ್ನೂ ಮತ್ತು ರಣದಲ್ಲಿ ಕಾದಿ ಮಡಿದ ವೀರರನ್ನೂ ಸುವರ್ಣದ ವಿಮಾನಗಳಲ್ಲಿ ರಜತಗಿರಿಗೆ ಕೊಂಡೊಯ್ಯುವನು. ಇಹಃಪಗೆಯಾಂಡರಿಗೆ ಗಣಪದವಿಯನ್ನೂ ಉಳಿದವರಿಗೆ ಶಿವಲೋಕದಲ್ಲಿ ನೆಲಸುವ ಭಾಗ್ಯವನ್ನೂ ಅನುಗ್ರಹಿಸುವನು.

ಹರಿಹರ ತನ್ನ ಬಸವರಾಜದೇವ ರಗಳೆಯಲ್ಲೂ ಈ ಪ್ರಸಂಗವನ್ನೆ ಹೋಲುವಂತಹ ಘಟನೆಯನ್ನೂ ಚಿತ್ರಿಸಿದ್ದಾನೆ. ಹರಿಹರನಿಗೆ ಇಹಃಪಗೆಯಾಂಡರ ಕಡು ಜಂಗಮನಿಷ್ಠೆ ಅದರಲ್ಲೂ ತಮ್ಮ ಪತ್ನಿಯನ್ನು ಬೇಡಿದ ವಿಟನಿಗೆ ಹಿಂದು ಮುಂದು ನೋಡದೆ ಇತ್ತ ಜಂಗಮ ಪ್ರೇಮ ತುಂಬಾ ಮೆಚ್ಚುಗೆಯಾಗಿರಬೇಕು. ಇಹಃಪಗೆಯಾಂಡರಂತೆಯೇ ಬಸವಣ್ಣನೂ ತನ್ನ ಪತ್ನಿಯನ್ನು ಬೇಡಿ ಬಂದ ಜಂಗಮರೂಪಿ ಶಿವನಿಗೆ ಹಿಂದು ಮುಂದೆ ನೋಡದೆ ಇತ್ತ.

ಇಳೆಯಾಂಡಗುಡಿಮಾರರ ರಗಳೆ :

ಪೆರಿಯಪುರಾಣದಲ್ಲಿ ಬರುವಂತೆ ಇಳೈಯಾನ್ಗುಡಿಯೆಂಬ ಊರಿನ ಶೂದ್ರರ ಕುಲದಲ್ಲಿ ಹುಟ್ಟಿರುವರು 'ಮಾಱನ್' ಅವರು ಉಳುಮೆ ಮಾಡುವವರು; ಶಿವಭಕ್ತರಿಗೆ ಅನ್ನದಾನ ಮೊದಲಾದ ಸೇವೆ ಮಾಡುವವರು. ರಗಳೆಯಲ್ಲಿ ಶಿವನ ಸೆಜ್ಜೆಯೆನಿಸುವ ಚೋಳದೇಶದಲ್ಲಿ ಇಳೆಯಾಂಡಗುಡಿಯೆಂಬ ಪುರದಲ್ಲಿ ಇಳೆಟಿಯಾಂಡ ಗುಡಿಮಾರನೆಂಬ ಹೆಸರಿನ ಮಗನು ಸದಾ ಶರಣರಿಚ್ಛೆಯನ್ನೇ ಸಲ್ಲಿಸಬೇಕೆಂದು ಆರಂಭ ಮಾಡುವನು. ಅವನ ಆರಂಭ ಅಂತರಂಗ, ಬಹಿರಂಗ ರೂಪದ್ದು.

ಸಮಚಿತ್ತವೆಂಬ ಭೂಮಿಯನು ಹಸನಾಗಿರಿಸಿ
ಅಮರ್ದ ಶಂಕರನ ನೆನಹೆಂಬ ನೇಗಿಲನಿರಿಸಿ
ಅರಿವರ್ಗವಾರುವಂ ತಂದು ಹೂಡುವೆತ್ತಂ ಮಾಡಿ
ಹರಿವ ಮನವಂ ಕಟ್ಟಿ ಹಿಡಿವ ಹಗ್ಗಂ ಮಾಡಿ
ಗರ್ವಿಸುವಹಂಕಾರಮುಮನಚ್ಚುವಂ ಮಾಡಿ
ಸರ್ವೇಶನಿಷ್ಠೆಯಿಂ ತಳಿವ ಬೀಜಂ ಮಾಡಿ
ಸುರುಚಿರ ಶಿವಜ್ಞಾನ ಶಶಿಕರಂ ಸೋಂಕುತಿರೆ
ಹರನ ಪರಮಾನಂದರಸದ ಮಳೆ ಕೊಳುತಮಿರೆ
ಬಿತ್ತಿ ಬೆಳೆವಂ ಶಿವನ ಸದ್ಭಕ್ತಿ ಸಸಿಗಳಂ
ಕಿತ್ತು ಕಳೆವಂ ಮೊಳೆವಪಾಪಾದಿ ಕಳೆಗಳಂ
ಇಂತು ತನ್ನೊಳಗೆ ಭಕ್ತ್ಯಾರಂಭವಂ ಮಾಳ್ಪ

ಅಂತೆಲ್ಲರಱಿಯೆ ಹೊಱಗಾರಂಬವಂ ಮಾಳ್ಪ

(ಪುಟ ೧೭, ಸಾಲು ೯-೨೦)

ಎಂದು ವೈಶಿಷ್ಟ್ಯ ಪೂರ್ಣವಾಗಿ ಹರಿಹರ ಹೇಳಿರುವನು.

ಪೆರಿಯಪುರಾಣದಲ್ಲಿ ಮಾಱನ ಅತಿಥಿ ಸೇವೆಯ ವಿವರ ಕಿರಿದಾಗಿದೆ. ರಗಳೆಯಲ್ಲಿ ಅದರ ವಿವರ ಹೆಚ್ಚಿದೆ. ಭಕ್ತರ ಸೇವೆಗಾಗಿ ತನ್ನಲ್ಲಿದ್ದ ಸಂಪತ್ತನ್ನೆಲ್ಲಾ ವ್ಯಯಿಸಿ ಕೊನೆಗೆ ಭೂಮಿ, ತೋಟ, ಮನೆಯ ಅರ್ಧಭಾಗ-ಇವನ್ನೆಲ್ಲಾ ಮಾರಿದ ಕಡುತ್ಯಾಗಿ ಇಳೆಯಾಂಡಗುಡಿಮಾರ. ಉಳಿದ ಒಂದು ಕೋಲಳತೆಯ ನೆಲದಲ್ಲಿ ಬಿತ್ತಿ ಬೆಳೆದು ಬಂದುದರಿಂದ ಶರಣರನ್ನು ತೃಪ್ತಿಪಡಿಸುತ್ತಿದ್ದನು. ಮತ್ತೆಯೂ ಶರಣರು ಬಂದರೆ ಉಟ್ಟುದು, ಹೊದ್ದುದು, ಇದ್ದುದು ಎಲ್ಲವನ್ನೂ ಕೊಟ್ಟು ಬಿಡುತ್ತಿದ್ದನು. ಕೊನೆಗುಳಿದುದು ಸತಿಗೊಂದು ಕಪ್ಪಡ, ತನಗೊಂದು ಮಗನಿಗೊಂದು ಕೋವಣ, ಮೂವರು ನಿಲ್ಲುವಷ್ಟು ಮನೆಯ ಜಾಗ ! ಹೀಗೆ ತೊಂಬತ್ತೈದು ವರ್ಷಗಳವರೆವಿಗೆ ಶರಣರ ಸೇವೆಯನ್ನು ಇಳೆಯಾಂಡಗುಡಿಮಾರ ಮಾಡಿದ.

ಪೆರಿಯಪುರಾಣದಲ್ಲಿ ಮಾಱನಾಯನಾರರು ತಮ್ಮ ಸಂಪತ್ತು ಕುಗ್ಗಿದರೂ ಮನಸ್ಸು ಕುಗಲಿಲ್ಲ. ಕಷ್ಟಪಟ್ಟು ಹೇಗೋ ಶಿವಭಕ್ತರ ಸೇವೆ ಮಾಡುತ್ತಿದ್ದರು. ಶಿವ ಭಕ್ತನನ್ನು ಪರೀಕ್ಷಿಸಲು ತಪಸ್ವಿಯೋರ್ವನ ವೇಷಧರಿಸಿ ಬರುವನು. ರಗಳೆಯಲ್ಲಿ ಶಿವ ತನ್ನ ಭಕ್ತನ ಮನವನ್ನು ಒರೆದು ನೋಡುವನೆಂದು, ಅವನನ್ನು ಕಾಡಿ ಕೈಲಾಸಕ್ಕೆ ಕರೆದು ತರುವೆನೆಂದು 'ಇಳೆಗೆ ಮಿಗೆ ಪೊಸತೆನಿಪ ಶತವೃದ್ಧಭಾವ'ವನ್ನು ಧರಿಸಿ ಜಡಿ ಮಳೆಯಲ್ಲಿ ನಡುವಿರುಳಿನಲ್ಲಿ ಇಳೆಯಾಂಡಗುಡಿಮಾರನ ಮನೆಗೆ ಬರುವನು. ಪೆರಿಯ ಪುರಾಣದಲ್ಲಿ, ಮಳೆಗಾಲದಲ್ಲಿ ಒಂದು ದಿನ ರಾತ್ರಿ ಒಂಟಿಯಾಗಿ ಎಚ್ಚತ್ತುಕೊಂಡೇ ತಮಗೆ ಉಪಕಾರ ಮಾಡುವವರು ಒಬ್ಬರೂ ಇಲ್ಲದೆ, ಹಸಿವು ಹೆಚ್ಚಿ ಆವರಿಸುತ್ತಿರುವುದನ್ನು ಅಡಗಿಸಿಕೊಂಡು ಬಾಗಿಲು ಮುಚ್ಚಿ ಇರುತ್ತಿರಲು, ಯಾರೋ ಬಾಗಿಲು ತಟ್ಟಿದಂತಾಗಿ ಅತಿಥಿಯನ್ನು ಎದುರುಗೊಳ್ಳಲು ಇಳೆಯಾಂಡಗುಡಿಮಾರ ನಾಯನಾರರು ಬರುವರು. ಕದ ತೆರೆದು ಮಾರನಾಯನಾರರು ನೆನೆದು ಬಂದ ಅತಿಥಿಯ ಮೈಯನ್ನು ಒರಸಿ, ವಿಶ್ರಮಿಸಲು ಒಂದು ಸ್ಥಳವನ್ನು ಕೊಟ್ಟು, ತಪೋಧನರ ಹಸಿವನ್ನು ನಿವಾರಿಸುವ ಬಗೆ ಏನೆಂದು ಪತ್ನಿಯೊಡನೆ ಆಲೋಚಿಸುವರು. ರಗಳೆಯಲ್ಲಿ ವೃದ್ಧ ವೇಷಧಾರಿ ಶಿವ ಇಳೆಯಾಂಡಗುಡಿಮಾರನ ಮನೆಯ ಮುಂದೆ ಕಡುಶೀತದಿಂದ ಅಳ್ಕಿ ಬಳ್ಕುತ್ತು ನಿಂದಿರಲು, ಮನೆಯೊಳಗೆ ಮೂರು ನಾಲ್ಕು ದಿವಸಗಳಿಂದ ಉಪವಾಸವಿದ್ದ, ಹರನಾಮವೇ ಹಾಸಲು ಹೊದೆಯಲಾಗಿದ್ದ, ಈಶನಾಮವೇ ಅತಿಶಯವಾದ ಚಳಿಯನ್ನು ಮರೆಯಲು ಸಾಧನವಾಗಿದ್ದ, ಅಂತರಂಗದಲ್ಲಿ ಶಿವನ ನೆನಹು ತುಂಬಿರಲು ಭೀಕರವಾದ ಚಳಿ ಸೋಂಕದವನಂತಿದ್ದ ಶಿವಭಕ್ತ ಇಳೆಯಾಂಡಗುಡಿಮಾರನು 'ಹರಹರ ನಮಃಶಿವಾಯ' ಎಂಬ ದನಿ ಕೇಳಿ ಕದವನ್ನು ತೆರೆದು ವೃದ್ಧನನ್ನು ನೋಡಿ, ನಮಸ್ಕರಿಸಿ ಭಯಗೊಂಡು ನಿಲ್ಲಲು, ಆಗ ವೃದ್ಧನು ನಡುಗಿ-

...........................................ಚಳಿ ಚಳಿಮಗನೆ
ಹರಣಮಂ ಹತ್ತಿತ್ತು ಶೀತವುಹುಹೆಲೆ ಮಗನೆ
ನಿಲಲಾಪೆನಿನ್ನೆಂತು ಕೈ ಕಾಲು ಸುರುಳ್ದಪವು
ಪಲವು ಮಾತೇನವಯಿವಂಗಳೆಲ್ಲರಲ್ದಪವು
ತನುವೊಡೆದಪುದು ಚಳಿಗೆ ಮನು ಸೀಳ್ದಿಪುದು ಚಳಿಗೆ

(ಪುಟ ೧೯, ಸಾಲು ೧೧೭-೧೨೧)

ಎಂದು ನುಡಿಯುವನು. ಇಳೆಯಾಂಡಗುಡಿಮಾರನು, ವೃದ್ಧನ ಚಳಿಯನ್ನು ನಿವಾರಿಸಲು ತನ್ನ ಮಾಳಿಗೆಯ ಜಂತೆಯನ್ನು ಇರಿದುಕೊಂಡು, ಅದನ್ನು ಬೆಂಕಿಗೊಡ್ಡಿ ಬೆಂಕಿಯನ್ನು ಪಟುಮಾಡುವನು. ವೃದ್ಧನ ತೊಡೆ, ತೋಳು, ಪಾದದ್ವಯ, ನಡು, ಬೆನ್ನು, ಎದೆ, ಮುಖ, ಕಿಬ್ಬದಿಗಳಲ್ಲಿ ಶೀತವಿರದಂತೆ ಮೆಲ್ಲನೆ ಕಾಸಿ ಒತ್ತುವನು. ಚಳಿ ಕಡಿಮೆಯಾದಂತೆ ಹಸಿವು ಹೆಚ್ಚಿ 'ಪಸಿದೆಂ ಪಸಿದೆಂ' ಎಂದು ವೃದ್ಧ ಕೂಗಾಡಲು ಮೂರು ದಿವಸಗಳಿಂದ ಉಪವಾಸವಿದ್ದ ಇಳೆಯಾಂಡಗುಡಿಮಾರನು ಅಂಜಿ ದಿಕ್ಕುಗೆಟ್ಟು ಪತ್ನಿಯ ಮುಖವನ್ನು ನೋಡುವನು.

ಪೆರಿಯಪುರಾಣದಲ್ಲಿ ಮಾರನಾಯನಾರರ ಪತ್ನಿ ಗಂಡನಿಗೆ, ಈ ಬೆಳಗ್ಗೆ ತುಂಬು ನೀರಿನಲ್ಲಿ ಬಿತ್ತಿದ 'ಶಂಬಾನೆಲ್ಲಿ' ಮೊಳಕೆಯನ್ನು ಗೋರಿಕೊಂಡು ತರುವಂತೆ ಹೇಳುವಳು. ರಗಳೆಯಲ್ಲಿ ಮೊನ್ನೆ ಬಿತ್ತಿದ ಮೊಳೆವಿತ್ತನ್ನು ಎತ್ತಿ ತರವಂತೆ ಇಳೆಯಾಂಡಗುಡಿಮಾರನಿಗೆ ಹೇಳುವಳು. ಪೆರಿಯಪುರಾಣದಲ್ಲಿ ಮೊಳೆವಿತ್ತನ್ನು ತಂದ ಮೇಲೆ ಬೆಂಕಿ ಹೊತ್ತಿಸಲು ಸೌದೆ ಇಲ್ಲವೆನಲು, ಮಾರನಾಯನಾರರು ಹಳೆಯದಾದ ತಮ್ಮ ಮನೆಯ ತೊಲೆಯನ್ನೇ ಕತ್ತರಿಸಿ ಕೆಡಹಿ ತುಂಡು ಮಾಡುವರು. ಅವರ ಪತ್ನಿ ಬೆಂಕಿ ಹೊತ್ತಿಸಿ ಮೊಳವಿತ್ತನ್ನು ಹುರಿದು ಒಣಗಿಸಿ ಕುಟ್ಟಿ ಅಕ್ಕಿ ಮಾಡಿ ಅದನ್ನು ಬೇಯಿಸಿ, ರುಚಿಯಾದ ಅನ್ನ ಮಾಡುವಳು. ಅನಂತರ ಆಕೆ ಮೇಲೋಗರಕ್ಕೆ ಏನು ಮಾಡೋಣವೆನ್ನಲು ಮಾರನಾಯನಾರರು ಹಿತ್ತಲಿನ ಕಿರುಪಯಿರುಗಳನ್ನು ಕಿತ್ತು ತಂದು ಪತ್ನಿಗೆ ಕೊಡುವರು. ಅಡಿಗೆ ಸಿದ್ಧವಾದ ಮೇಲೆ ಅತಿಥಿಯಲ್ಲಿಗೆ ಬಂದು ತೃಪ್ತಿಯಾಗುವಂತೆ ಭೋಜನ ಮಾಡಿ ಅನುಗ್ರಹಿಸಬೇಕು ಎಂದು ಬಿನ್ನವಿಸಿದಾಗ, ಆ ತಪಸ್ವಿಯು ಜ್ಯೋತಿಯಾಗಿ ಎದ್ದು ಕಾಣಿಸಿಕೊಳ್ಳುವನು. ಅದನ್ನು ಕಂಡು ದಂಪತಿಗಳು ದಿಗಿಲುಗೊಂಡು ನಿಲ್ಲುವರು. ಶಂಕರನು ಉಮೆಯೊಡನೆ ಕಾಣಿಸಿಕೊಂಡು 'ಪ್ರಿಯನೇ, ನನ್ನ ಪ್ರಿಯ ಭಕ್ತರಿಗೆ ಪೂಜೆ ಸಲ್ಲಿಸಿದ ನೀನು ನಿನ್ನ ಮಡದಿಯೊಡನೆ ನನ್ನ ಮಹತ್ತಾದ ಸ್ಥಳವನ್ನು ಸೇರಿ, ಮಹಾನಿಧಿಗಳಿಗೊಡೆಯನಾದ ಕುಬೇರನೇ ನಿನ್ನೆದುರಿಗೆ ಮಹಾನಿಧಿಗಳನ್ನು ಎತ್ತಿ ಹಿಡಿದುಕೊಂಡು ನೀನು ಹೇಳಿದ ಪ್ರಕಾರವಾಗಿ ಸೇವೆ ಮಾಡುತ್ತಿರಲು ಆನಂದ ತುಂಬಿ ಪರಮ ಸೌಖ್ಯದಿಂದಿರು' ಎಂದು ಅನುಗ್ರಹ ಮಾಡುವನು.

ರಗಳೆಯಲ್ಲಿ, ದಂಪತಿಗಳು ಮೊಳೆದಿತ್ತನ್ನು ಹುರಿದು ಅಮೃತಸಮಾನವಾದ ಅನ್ನಮಾಡಿ ಬೆಳೆದ ಕೀರೆಯನ್ನು ತಂದು ಮೇಲೋಗರ ಮಾಡಿ ಭಕ್ತನ ಆರೋಗಣೆಗೆ ಸಿದ್ಧಮಾಡುತ್ತ, ಮಗನನ್ನು ಬಾಳೆ ಎಲೆ ಕೊಯ್ದು ತರಲು ಕಳುಹಿಸುವರು. ಎಲೆ ಕೊಯ್ಯುವಾಗ ಶಿವನಾಜ್ಞೆಯಂತೆ ಹಾವೊಂದು ಅವನನ್ನು ಕಚ್ಚಿ ಪ್ರಾಣ ಹೋಗುವಂತೆ ಮಾಡುತ್ತದೆ. ವೃದ್ಧ ವೇಷದ ಶಿವ ಹಸಿದೆನೆನ್ನುತಿರಲು ಮಗ ತಡಮಾಡಿದನೆಂದು ಇಳೆಯಾಂಡಗುಡಿಮಾರನೇ ಬಂದು ನೋಡಲು, ಮಗ ಹಾವು ಕಡಿದು ಸತ್ತು ಬಿದ್ದಿದ್ದ. ಇದನ್ನರಿತರೆ ಭಕ್ತ ಉಣಲೊಲ್ಲನೆಂದು ಚಿಂತಿಸಿ, ಇದನ್ನು ತಿಳಿಸದೆಯೆ ಉಣಲಿಕ್ಕೆ ವೃದ್ಧ ಭಕ್ತನನ್ನು ಸಂತೋಷಗೊಳಿಸುವೆನೆಂದು ಎಲೆ ಕೊಯ್ದುತಂದು, ಭಕ್ತನ ಮುಂದೆ ಹಾಸಿ ಸದಾಶಿವನೇ ಇನ್ನು ಆರೋಗಿಸಿ ಎಂದು ಪ್ರಾರ್ಥಿಸುವನು. ಶಿವಭಕ್ತನು ಸಹ ಪಂಕ್ತಿಯಲ್ಲುಣಬೇಕು, ತಂದೆ ಮಕ್ಕಳು ಪಕ್ಕದಲ್ಲಿ ಕುಳ್ಳಿರಿ ಎನ್ನಲು ಆ ಮಾತು ಕೇಳಿ ನೊಂದು 'ಶಿವನು ಮಗನಿಲ್ಲದಿದ್ದರೆ ಉಣಲೊಲ್ಲನು ಏನು ಮಾಡಲಿ ಕರೆದು ನೋಡುವೆನು' ಎಂದು ಮಗನ ಹತ್ತಿರ ನಿಂತು

ತನುಜ ಏಳ್ಮಗನೆ ಹರನುಣಲೊಲ್ಲನೀಗೆಂದು
ಕರೆಯಲಾಗಳೆ ನಿದ್ರೆ ತಿಳಿದೇಳ್ವರಂದದಿಂ

(ಪುಟ ೨೦, ಸಾಲು ೧೮೦-೮೧)

ಎದ್ದ ಮಗನೊಡನೆ ಇಳೆಯಾಂಡ ಗುಡಿಮಾರನು ಬರಲು

ಪುರಹರಂ ವೃದ್ಧವೇಷಮನುಳಿದು ತೊಳತೊಳಗೆ
ಜೆಡೆ ಚಂದ್ರ ಕಳೆ ನೊಸಲ ಕಣ್ ನಾಗಕುಂಡಲಂ
ತೊಡಿಗೆಯಿಹಿ ಕರೆಗೊರಲು ಮಿರುಪ ಮುಖಮಂಡಲಂ
ದಶಭುಜಂ ಡಮರುಗಂ ತ್ರಿಶೂಲ ಗಜಾಜಿನಂ
ದೆಸೆದೆಸೆಯ ಬೆಳಪ ಪುಲಿದೊವಲ ಪಂಚಾನನಂ"

(ಪುಟ ೨೦, ಸಾಲು ೧೮೪-೧೮೮)

ಕಂಡ. ವೃದ್ಧ ವೇಷ ತೊರೆದು ನಿಜರೋಪುದೋರಿದ ಶಿವನು, ತನ್ನಭಕ್ತನನ್ನು ನಂದೀಶನ ಮುಂದೆ ಹೊಗಳಿ ಪುಷ್ಪಕ ವಿಮಾನದಲ್ಲಿ ಆ ಮೂವರನ್ನು ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನು ಅನುಗ್ರಹಿಸುವನು.

ಪೆರಿಯಪುರಾಣದಲ್ಲಿ ಮಾರನಾಯನಾರರಿಗೆ ಓರ್ವ ಮಗನಿದ್ದ ವಿಚಾರ ಎಲ್ಲೂ ಬರುವುದಿಲ್ಲ. ಇದ್ದ ಒಬ್ಬ ಮಗನೂ ಹಾವು ಕಡಿದು ಸತ್ತ ಪ್ರಸಂಗ ಹರಿಹರನ ಸ್ವಂತ ಕಲ್ಪನೆ. ತನ್ನ ನಾಯಕನ ಕಡು ನಿಷ್ಠೆಯನ್ನು ತಿಳಿಸಲು ಈ ಪ್ರಸಂಗವನ್ನು ತಂದಿದ್ದು, ಆ ಮೂಲಕ ನಾಯಕನ ವ್ಯಕ್ತಿತ್ವ ಮತ್ತಷ್ಟು ಕಳೆಕಟ್ಟುವಂತೆ ಮಾಡಿರುವನು. ಪೆರಿಯಪುರಾಣದ ತಿರುನೀಲಕಂಠ ರಗಳೆಯಲ್ಲಿನ ಮಗನ ಪ್ರಸ್ತಾಪವನ್ನು ಹರಿಹರ ಇಳೆಯಾಂಡಗುಡಿಮಾರರ ರಗಳೆಯಲ್ಲಿ ತಂದಿದ್ದಾನೆ. ಪುರಾಣದಲ್ಲಿನ ಮಗನ

ಪ್ರಸ್ತಾಪ ಅರ್ಥಹೀನವಲ್ಲದಿದ್ದರೂ ಅಗತ್ಯವಿರಲಿಲ್ಲ. ಏಕೆಂದರೆ ಕೊಳದ ಪ್ರಸ್ತಾಪವಿದೆ. ಗುಡಿಮಾರನ ರಗಳೆಯಲ್ಲಿ ಮಗನ ಪ್ರಸ್ತಾಪ ಅಗತ್ಯವಿದೆ ಎಂದು ಹರಿಹರನಿಗೆ ಕಂಡು ಬಂದುದರಿಂದ ಈ ಬದಲಾವಣೆ ಮಾಡಿಕೊಂಡಿದ್ದಾನೆ.

ಸೇದಿರಾಜರ ರಗಳೆ :

ಪೆರಿಯಪುರಾಣದಲ್ಲಿ ಈ ಪುರಾತನ ಭಕ್ತನನ್ನು ಮೆಯ್ಪೊರುಳ್ ನಾಯನಾರರೆಂದು ಕರೆಯಲಾಗಿದೆ. (ಶಿವಭಕ್ತರ ವೇಷವನ್ನೇ ನಿಜವಸ್ತು ಎಂದು ಭಾವಿಸಿ ಚಿಂತಿಸುತ್ತಿದ್ದುದರಿಂದ ಅವರಿಗೆ 'ಮೆಯ್‌ಪ್ಪೊರುಳ್' ನಾಯನಾರ್ ಎಂದು ಹೆಸರಾಯಿತು). ರಗಳೆಯಲ್ಲಿ ಈ ಪುರಾತನ ಭಕ್ತರನ್ನು ಸೇದಿರಾಜರೆಂದು ಕರೆಯಲಾಗಿದೆ. ಇವರು 'ಚೇದಿ' ಎಂಬ ನಾಡಿನ ದೊರೆಯಾಗಿದ್ದುದರಿಂದ ರಗಳೆಯಲ್ಲಿ ಸೇದಿರಾಜರೆಂದು ಕರೆಯಲಾಗಿದೆ.

ಪೆರಿಯಪುರಾಣದಲ್ಲಿ ಮೆಯ್ಪೊರುಳ್‌ನಾಯನಾರರು ಚೇದಿ ನಾಡಿನಲ್ಲಿ ಪ್ರಸಿದ್ಧಿ ಹೊಂದಿದ ತಿರುಕ್ಕೋವಲೂರಿನಲ್ಲಿ ವಾಸ ಮಾಡುತ್ತಿದ್ದರೆಂದು ಹೇಳಿದರೆ, ರಗಳೆಯಲ್ಲಿ ಚೋಳದೇಶದ ತಿರುನಾವಲೂರೆಂದು ಹೇಳಲಾಗಿದೆ. ಪೆರಿಯಪುರಾಣದಲ್ಲಿ ಒಂದು ಮಾತಿನಲ್ಲಿ ಹೇಳಿದ ಮೆಯ್ಪೊರುಳ್ ನಾಯನಾರರ ಭಕ್ತಿ ಪ್ರೇಮವನ್ನು ಹರಿಹರ –

ಎಱಗಿಪಂ ತನ್ನ ಚರಣಕ್ಕಖಿಲ ಭೂಪರಂ
ಎರಗುವಂ ತಾನಭವಭಕ್ತರ್ಗೆ ಸಾದರಂ
ಶಿವನ ಭಕ್ತರ ಬರವೆ ವರವೆಂದು ಭಾವಿಪಂ
ಭವನ ಭಕ್ತರ ಬರವೆ ಸಿರಿಯೆಂದು ಸೇವಿಪಂ
ಹರನ ಭಕ್ತರ ಬರವೆ ಆಯುವೆಂದುರ್ಬುವಂ
ಪರಮ ಭಕ್ತರ ಬರವೆ ಹರಣವೆನೆ ಕೊರ್ಬುವಂ
ಭಕ್ತರೆಂದುದೆ ತನಗೆ ಶಿವಶಾಸನಂ ನೋಡ
ಭಕ್ತರಿತ್ತುದೆ ತನಗೆ ಜೀವದುನ್ನತಿ ನೋಡ
ಶಿವ ಭಕ್ತರುಟ್ಟ ಬೀಳುಡೆ ತಾನುಡುವುದೆಲ್ಲಂ
ಶಿವನ ಭಕ್ತರ ಪ್ರಸಾದಂ ತಾಂ ಸವಿವುದೆಲ್ಲ
ಆಣೆ ಭಕ್ತರದು ಘೋಷಣೆ ಭಕ್ತರದು ನೋಡ
ಕ್ಷೋಣಿ ಭಕ್ತರದು ತೇಜಂ ಭಕ್ತರದು ನೋಡ
ಕರಿ ತುರಗ ಭಂಡಾರವವು ಭಕ್ತರವು ನೋಡ
ಅರಸುತನವಧಿಕ ತನಮವು ಭಕ್ತರವು ನೋಡ
ಭಕ್ತರಿರಿಸಿದ ಬಂಟನಾನೆಂದು ಹೆಚ್ಚುವಂ
ಭಕ್ತರಿಟ್ಟ ಪ್ರತಿಷ್ಠೆಯನೆತಾನಚ್ಚುವಂ (ಪುಟ-೨೧, ಸಾಲು ೨೭-೪೨)

ಎಂದು ವಿಸ್ತಾರವಾಗಿ ವರ್ಣಿಸಿ ಹೇಳಿರುವನು. ಪೆರಿಯಪುರಾಣದಲ್ಲಿ ಒಬ್ಬ ರಾಜನು ಮೆಯ್ಪೊರುಳ್ ನಾಯನಾರರನ್ನು ಗೆಲ್ಲುವ ಆಸೆಯಿಂದ ಅವರ ಮೇಲೆ ಯುದ್ಧವನ್ನು ಹೂಡಿ ಆನೆ, ರಣಕುದುರೆ, ಕಾಲಾಳು, ತೇರು ಮೊದಲಾದುವುಗಳನ್ನೂ, ಯುದ್ಧ ಸಾಧನಗಳನ್ನೂ ಹಲವು ಬಾರಿ ಕಳೆದುಕೊಂಡು ಸೋತು ಅವಮಾನ ಹೊಂದಿ ಹೋದನೆಂದು ಹೇಳಲಾಗಿದೆ. ರಗಳೆಯಲ್ಲಿ ಸೇದಿರಾಜನ ಮೇಲೆ ಯುದ್ಧ ಮಾಡಲು ಬಂದವನು ಅವನ ದಾಯಾದಿಯೆಂದು ಹೇಳಲಾಗಿದೆ. ಪೆರಿಯಪುರಾಣದಲ್ಲಿ ಸೋತ ಶತ್ರುರಾಜನು ಮೆಯ್ಪೊರುಳ್ ನಾಯನಾರರನ್ನು ವಂಚಿಸಿ ಗೆಲ್ಲುವ ತೀರ್ಮಾನ ಮಾಡಿ ಶಿವಭಕ್ತನ ವೇಷಧರಿಸಿ ತಿರುಕ್ಕೋವಲೂರಿಗೆ ಬರುವನು. ರಗಳೆಯಲ್ಲಿ ಸೇದಿರಾಜನ ದಾಯಾದಿಯು ಯುದ್ಧದಲ್ಲಿ ಪರಾಜಯ ಹೊಂದಿ ಪರರಾಜನೋರ್ವನಲ್ಲಿ ಆಶ್ರಯ ಪಡೆದು ಅರ್ಧರಥರು, ಮಹಾರಥರು, ಸಮರಥರು ವಿರಾಗ್ರಣಿಗಳು ಇವರನ್ನೆಲ್ಲ ಕೂಡಿಕೊಂಡು ಬಂದು ಯುದ್ಧ ಮಾಡಿ ಸೋತು ಓಡಿಹೋಗಿ, ಸೋಲಿನಿಂದ ಅವಮಾನಿತನಾಗಿ ಕೊನೆಗೆ ಭಕ್ತನ ವೇಷಧರಿಸಿ, ಸೇದಿರಾಜನನ್ನು ವಂಚಿಸಿ, ಕೊಂದು ತಾನು ರಾಜನಾಗುವ ಆಸೆಯಿಂದ ಬರುವನು.

ಪೆರಿಯಪುರಾಣದಲ್ಲಿ ಮೆಯ್ಪೊರುಳ್ ನಾಯನಾರರ ಶತ್ರುವು ಬೌದ್ಧನೆಂದೂ, ಅವನ ಹೆಸರು ಮುಕ್ತನಾಥನೆಂದೂ ಸೂಚ್ಯವಾಗಿ ಹೇಳಲಾಗಿದೆ. ಮುಕ್ತನಾಥನು ಕೈಯಲ್ಲಿ ಆಯುಧವನ್ನಡಗಿಸಿಟ್ಟ ಪುಸ್ತಕದ ಕವಳಿಗೆಯನ್ನು ಹಿಡಿದುಕೊಂಡು, ಕಪ್ಪನ್ನು ಒಳಗೆ ಅಡಗಿಸಿಕೊಂಡಿರುವ ದೀಪದ ಹಾಗೆ ತನ್ನ ಮನಸ್ಸಿನಲ್ಲಿ ಕೋಪವನ್ನು ಮುಚ್ಚಿಟ್ಟುಕೊಂಡು, ಹುಸಿ ತಪಸ್ವಿಯ ವೇಷಧರಿಸಿ ತಿರುಕ್ಕೋವಲೂರನ್ನು ಪ್ರವೇಶ ಮಾಡಿದನೆಂದು ಹೇಳಲಾಗಿದೆ. ರಗಳೆಯಲ್ಲಿ ಶತ್ರುವು ಕವಳಿಗೆಯೊಳಗೆ ತನ್ನ ಮನಸ್ಸನ್ನು ಇರಿಸುವ ರೀತಿಯಲ್ಲಿ ಹರಿತವಾದ ಕತ್ತಿಯನ್ನು ಇರಿಸಿ ಅಂತರಂಗದಲ್ಲಿ ಕೊಲೆಯ ಕುಡಿ ನಿಮಿರಿ ಹೆಚ್ಚುತ್ತಿರಲು ಭಕ್ತನಂತೆ ಹೊರವೇಷ ಧರಿಸಿ ಸೇದಿರಾಜನ ನಗರವನ್ನು ಪ್ರವೇಶಿಸಿದನೆಂದು ಹೇಳಲಾಗಿದೆ.

ಪೆರಿಯಪುರಾಣದಲ್ಲಿ ಮಹಾತಪಸ್ವಿಯ ವೇಷಧರಿಸಿ ಬಂದ ವಂಚಕನು ಅರಮನೆಯ ಮುಖ್ಯ ದ್ವಾರಗಳನ್ನೆಲ್ಲಾ ದಾಟಿ ಅರಸನ ಶಯ್ಯಾಗೃಹಕ್ಕೆ ಬರುವನು. ಅರಸನ ಅಂಗರಕ್ಷಕನಾದ ದತ್ತನು ಆ ವಂಚಕನನ್ನು ಕುರಿತು 'ಸಮಯವನ್ನು ತಿಳಿದುಕೊಂಡು ಸ್ವಾಮಿಗಳು ಒಳಗೆ ದಯಮಾಡಿಸಬೇಕು. ನಮ್ಮರಸರು ಈಗ ನಿದ್ದೆ ಮಾಡುತ್ತಿರುವರು' ಎನ್ನುವನು. ಅದಕ್ಕೆ ವೇಷಧಾರಿ ಭಕ್ತನು 'ನಾನು ಇವನಿಗೆ ಸತ್ಯವನ್ನು ಉಪದೇಶಿಸಲಿರುವುದರಿಂದ ನೀನು ಅತ್ತ ನಿಲ್ಲು' ಎಂದು ಅವನನ್ನು ನಿವಾರಿಸಿ ಒಳ ಹೋಗುವನು. ಅರಸನ ರಾಣಿ ಮಹಾದೇವಿಯು ಅನಿರೀಕ್ಷಿತವಾಗಿ ಬಂದ ಭಕ್ತನನ್ನು ಕಂಡು ಗಂಡನನ್ನು ಎಚ್ಚರಿಸುವಳು. ಅರಸನು 'ದೇವತೆಗಳ ನಾಯಕನ ಭಕ್ತರಿವರು' ಎಂದು ಕೈ ಮುಗಿದು ನಮಸ್ಕಾರ ಮಾಡಿ ಬಂದ ಕಾರಣವನ್ನು ಕೇಳುವನು. ವಂಚಕನು ಅರಸನಿಗೆ 'ನಿಮ್ಮ ನಾಯಕರು ಈ

ಮೊದಲೇ ಹೇಳಿದ ಆಗಮಶಾಸ್ತ್ರಗಳಲ್ಲಿ ಅಪೂರ್ವವೆನ್ನಿಸಿರುವ ಆಗಮವನ್ನು ನಿನಗೆ ಉಪದೇಶಿಸುವುದಕ್ಕಾಗಿ ತೆಗೆದುಕೊಂಡು ಬಂದಿದ್ದೇನೆ' ಎನ್ನಲು 'ಆ ಶಿವಾಗಮ ಶಾಸ್ತ್ರವನ್ನು ದಯಿಮಾಡಿ ಓದಿಹೇಳಿ' ಎಂದು ಅರಸನು ಪ್ರಾರ್ಥಿಸುವನು. ಆಗ ವಂಚಕನು 'ನರುಗಂಪಿನ ಹೂಗಳನ್ನು ಮುಡಿದ ನಿಮ್ಮ ರಾಣಿ ಇಲ್ಲದೆ, ನಾನು ನೀನು ಇಬ್ಬರೇ ಏಕಾಂತ ಸ್ಥಳದಲ್ಲಿರಬೇಕು' ಎಂದು ಹೇಳುವನು. ರಗಳೆಯಲ್ಲಿ ವೇಷಧಾರಿ ಭಕ್ತನನ್ನು ಕಂಡ ತಕ್ಷಣ ರಾಜನು ಅವನ ಕಾಲ ಮೇಲೆ ಬಿದ್ದು ನಮಸ್ಕರಿಸಿ ಆನಂದಾಶ್ರುಗಳನ್ನು ಸುರಿಸುತ್ತ ರೋಮಾಂಚನದಿಂದ ಕೊಬ್ಬಿ ಕೊನರುತ್ತ ಉಂಟಾದ ಗದುಗದಿಕೆಯಿಂದ ಕಣ್ಮುಚ್ಚಿ ಕರಗುತ್ತ ಕೈಕೊಟ್ಟು ಕರೆತಂದು ಸಿಂಹಾಸನದ ಮೇಲಿರಿಸಿ ಪಾದಗಳನ್ನು ತೊಳೆದು ತೀರ್ಥಜಲವನ್ನು ಪಡೆದು ಸಂತೋಷದಿಂದ ಅಡ್ಡಬಿದ್ದು ಮೇಲೆದ್ದು ಕೈಮುಗಿದು ನಿಂತು 'ದೇವ ಕರುಣಿಪುದು ಬಿಜಯಂಗೆಯ್ದ ಕಾರ್ಯಮಂ ಆವುದೆಂದರಿಪುವುದು ಮಾಳ್ಪೆನದಕುಚಿತಮಂ' ಎಂದು ಹೇಳಿ ಪ್ರಾರ್ಥಿಸುವನು. ವೇಷಧಾರಿಯು ಶೈವಾಗಮವನ್ನು ಏಕಾಂತದಲ್ಲಿ ಅರಸನಿಗೆ ತಿಳಿಸುವೆನೆಂದಾಗ ಆತ ಹರುಷಗೊಂಡು 'ತೆಗೆಯಿಮೆಲೆದೇವ ಕರುಣಿಪುದು' ಎಂದು ಹೇಳಿ ಶೈವಾಗಮನದ ಗೋಷ್ಠಿಯಲ್ಲಿ ಸಕಲ ಭಕ್ತರ ಚರಿತ್ರ ಪ್ರಸಂಗದಲ್ಲಿರುತ್ತಿರಲು ಕತ್ತಲಾಯಿತು. ಓಲಗದಲ್ಲಿದ್ದವರನ್ನೆಲ್ಲಾ ಬೀಳ್ಕೊಟ್ಟ ಅರಸ ವೇಷಧಾರಿಗೆ ಸ್ನಾನಮಾಡಿಸಿ ಶಿವಪೂಜೆಯ ಮನೆಯಲ್ಲಿ ಕುಳ್ಳಿರಿಸಿದನು. ವಂಚಕನು ನಿಜ ಭಕ್ತನಂತೆ ಭಸ್ಮಧಾರಣೆ ಮಾಡಿ ಹುಸಿ ದೈವಾರ್ಚನೆಯನ್ನು ನಟಿಸಿ ಪ್ರಸಾದ ಪಡೆದು ಕುಳ್ಳಿರಲು ಅಲ್ಲಿಗೆ ಸೇದಿರಾಜನು ಬಂದು ದಿವ್ಯಾಗಮನವನ್ನು ಅನುಗ್ರಹಿಸಿ ಕೃತಾರ್ಥನನ್ನಾಗಿ ಮಾಡಿ ಎಂದು ಪ್ರಾರ್ಥಿಸುವನು.

ಪೆರಿಯಪುರಾಣದಲ್ಲಿ ತಪಸ್ವಿಯ ವೇಷ ಧರಿಸಿ ಬಂದ ವಂಚಕನನ್ನು ಪೀಠದ ಮೇಲೆ ಕುಳ್ಳಿರಿಸಿ, ತಾನು ನೆಲದ ಮೇಲೆ ಕುಳಿತು 'ದಯಿಮಾಡಿ ಶಾಸ್ತ್ರೋಪದೇಶ ಮಾಡಬೇಕು ಎಂದು ಪ್ರಾರ್ಥಿಸುವನು. ವಂಚಕನು ಏಕಾಂತದಲ್ಲಿ, ತನ್ನ ಕೈಯಲ್ಲಿ ಹಿಡಿದಿದ್ದ ವಂಚನೆಯ ಕವಳಿಗೆಯನ್ನು ತನ್ನ ತೊಡೆಯ ಮೇಲಿಟ್ಟುಕೊಂಡು ಓದಲು ಬಿಚ್ಚುವವನ ಹಾಗೆ ನಟಿಸುತ್ತ ಮೆಯ್ಪೊರುಳ್ ನಾಯನಾರರು ನಮಸ್ಕಾರ ಮಾಡುತ್ತಿರುವ ಸಮಯದಲ್ಲಿ ಕವಳಿಗೆಯಲ್ಲಿ ಮರೆಸಿಟ್ಟಿದ್ದ ಕಿರುಗತ್ತಿಯನ್ನು ತೆಗೆದುಕೊಂಡು ತಾನು ಮೊದಲೇ ಯೋಚಿಸಿದ್ದಂತೆ ಅರಸನ ಬೆನ್ನಿಗೆ ಇರಿದನು. ಆ ವಂಚಕನ ಮೇಲೆ ಕಣ್ಣಿಟ್ಟಿದ್ದ ಅರಸನ ವಿಶೇಷ ಕಾವಲುಗಾರನಾದ ದತ್ತನು ಆ ಕ್ಷಣವೇ ಅಲ್ಲಿಗೆ ಬಂದು, ತನ್ನ ಕೈಯ ಕತ್ತಿಯಿಂದ ವಂಚಕನನ್ನು ತುಂಡರಿಸಲು ಅನುವಾದನು. ಆಗ ರಕ್ತಸಿಕ್ತರಾಗಿ ಕೆಳಗೆ ಬೀಳುತ್ತಿದ್ದ ನಾಯನಾರರು 'ದತ್ತಾ ಇವರು ನಮ್ಮವರು' ಎಂದು ತಡೆದು, ಕೆಳಗೆ ಬಿದ್ದರು. ಆಗ ದತ್ತನು ಅರಸನಿಗೆ ವಂದಿಸಿ ಅವರ ತಲೆಯನ್ನು ಕೈಯಲ್ಲಿ ಹಿಡಿದುಕೊಂಡು, 'ಏನು ಮಾಡಲಿ ನಾನು' ಎಂದು ಕೇಳಲು, ಅದಕ್ಕೆ ನಾಯನಾರರು 'ನಮ್ಮ ಸ್ವಾಮಿ ಪರಮೇಶ್ವರನ ಭಕ್ತರು ಇವರು. ಇಲ್ಲಿಂದ ಹೋಗುವಾಗ ಕಾವಲವರೇ ಮೊದಲಾದ ಯಾರೂ ನಡುವೆ ಇವರ

ಮೇಲೆ ಬಿದ್ದು ಇವರನ್ನು ತಡೆಯದ ಹಾಗೆ ನೋಡಿಕೊಂಡು ಇವರನ್ನು ಕರೆದುಕೊಂಡು ಹೋಗಿ ಬಿಟ್ಟು ಬಿಡು' ಎಂದು ಅಪ್ಪಣೆ ಮಾಡುವರು.

ರಗಳೆಗಳಲ್ಲಿ ಮಧ್ಯರಾತ್ರಿಯಲ್ಲಿ ದಿವ್ಯಾಗಮವನ್ನು ಉಪದೇಶಿಸುವಾಗ ಯಾರೂ ಹತ್ತಿರವಿರಬಾರದೆಂಬ ನೆಪವೊಡ್ಡಿ, ಅರಸಿ ಹಾಗೂ ಹಡಪಿಗನನ್ನೂ ಹೊರಗೆ ಕಳುಹಿಸಿ ವಂಚಕನು ರಾಜನಿಗೆ 'ಈ ಕವಳಿಗೆಗೆ ಮೊದಲು ಅಡ್ಡಬೀಳು ಎನ್ನುವನು. ಸೇದಿರಾಜ ಶ್ರದ್ಧಭಕ್ತಿಯಿಂದ ನಮಸ್ಕರಿಸುವಾಗ ದಂಭಕನು ಕವಳಿಗೆಯೊಳಗಿಂದ ಝಳುಝಳಿಸುವ ಅಲಗನ್ನು ಬೇಗನೆ ತೆಗೆದು ಅರಸನ ನಡುಬೆನ್ನಲ್ಲಿ ಇರಿದನು. ಆ ಸಂದರ್ಭದಲ್ಲೂ ಅಳುಕದೆ ಬಳುಕದೆ ಅಂಜದೆ ಪ್ರೀತಿಯಿಂದ ಕೃತಾರ್ಥಭಾವವನ್ನು ಹೊಂದುತ್ತಾ ಚಲಿಸದೆ ಬೆನ್ನನ್ನು ಒಡ್ಡಿಕೊಂಡಿರಲು ಅದನ್ನು ಕಂಡ ಆ ದಂಭಕನು, ಮುಂದುಗೆಟ್ಟು ಹಿಮ್ಮೆಟ್ಟಿ ಭಯದಿಂದ ಬೆವರಿದನು. ಸೇದಿರಾಜ ಅವನನ್ನು ಮೆಲ್ಲನೆ ನೋಡಿ 'ಹರನೇ ಕೈ ನೊಂದವೇ, ಎಲೆ ದೇವ ಅಲಗೊತ್ತಿ ಅಂಜದಿರು ದೇವ ನೆಖಿಮಾಡು ನಿನ್ನಿಚ್ಛೆಯಿಂ ಅಂಜೆನೊಪ್ಪಿಸಿದೆ ನೀ ತನುವನಿದು ನಿಶ್ಚಯಿಂ' ಎಂದು ಅವನ ಕೈಯಿಂದಲೇ ಮೆಲ್ಲನೆ ಮೇಲೇಳಿಸಿಕೊಂಡು, ಕೈ ಹಿಡಿದು ನಡೆದು ಇರಿದಲಗು ಕಾಣಬಾರದ ರೀತಿಯಲ್ಲಿ ಮುಸುಕು ಹಾಕಿಕೊಂಡು ಧೈರ್ಯಮೂರ್ತಿಯಾದ ಅರಸ ಸಿಂಹಾಸನದಲ್ಲಿ ಕುಳಿತು ಕಂಪಿಸುವ ಭಕ್ತನನ್ನು ಸಮಾಧಾನಿಸಿ ಬೆಳಗಿನ ಜಾವದ ವೇಳೆಗೆ ಅಮಾತ್ಯನನ್ನು ಕರೆಸುವನು. ಸೇದಿರಾಜ ತನ್ನ ಮಂತ್ರಿಗೆ–

ಇಂದು ಶೈವಾಗವವನೆನಗರೆಪಿದವರಿವರು
ಇವರಿಂದ ಪಲವು ಲೇಸುಗಳೆಮಗೆ ಮಿಗೆ ಹೊದ್ದಿದವು
ಇವರಿಂದ ಪರಮ ಶಿವಮಂತ್ರಂಗಳೊದಗಿದವು
(ಪುಟ ೨೩, ಸಾಲು ೧೫೬-೧೫೮)

ಎಂದು ಹೇಳಿ ಭಂಡಾರದಿಂದ ಹೊಸ ಹೊನ್ನುಗಳನ್ನು ತರಿಸಿ ಸಂತೋಷದಿಂದ ಕವಳಿಗೆಯೊಳಗೆ ಸುರಿದು, ಇವರನ್ನು ಇಂದು ಕ್ಷೇಮದಿಂದ ಕಳುಹಿಸಿಬಾರೆಂದು ಹೇಳಿ ತನ್ನ ಸಚಿವನ ಜೊತೆ ವಂಚಕನನ್ನು ಕಳುಹಿಸುವನು.

ಪೆರಿಯಪುರಾಣದಲ್ಲಿ ವಂಚಕನನ್ನು ಕೊಲ್ಲಲು ಬಂದವರನ್ನು ದತ್ತನು ತಡೆಯುವನು, ಅವರಿಗೆ ರಾಜರ ಅಪ್ಪಣೆ ತಿಳಿಸಿ ನಿಷ್ಕಂಟಕವಾದ ದಾರಿಯಲ್ಲಿ ಕರೆದೊಯ್ದು ಜನಸಂಚಾರವಿಲ್ಲದ ಕಾಡಿನ ಬಳಿ ಅವನನ್ನು ಬಿಟ್ಟು ಬರುವನು. ದತ್ತನ ಆಗಮನವನ್ನೇ ನಿರೀಕ್ಷಿಸುತ್ತಾ ಸೋರಿಹೋಗುತ್ತಿದ್ದ ಪ್ರಾಣವನ್ನು ಮೆಯ್ಪೊರುಳ್‌ನಾಯನಾರರು ತಾಳಿಕೊಂಡಿದ್ದರು. 'ಭಕ್ತನನ್ನು ಸುರಕ್ಷಿತವಾಗಿ ಬಿಟ್ಟುಬಂದೆ' ಎಂದು ದತ್ತನು ಹೇಳಿದ ಮೇಲೆ ಅವನಿಗೆ ತಮ್ಮ ಅಪಾರ ಕರುಣೆಯನ್ನು ತೋರಿ, ನಾಯನಾರರು ತಮ್ಮ ಮಗ, ಸೋದರ, ಮಂತ್ರಿ ಮೊದಲಾದ ಪ್ರೀತಿ ಪಾತ್ರರಿಗೆ 'ವಿಭೂತಿಯ ಮೇಲಿನ ಪ್ರೀತಿಯನ್ನು ತಪ್ಪದೆ ಕಾಪಾಡಿಕೊಂಡು ಬನ್ನಿ'

ಎಂದು ತಿಳಿಸಿ ಶಿವನ ಪಾದಗಳನ್ನು ಧ್ಯಾನಿಸುವರು. ಆಗ ಶಿವ ಮೆಯ್ಪೊರುಳ್‌ನಾಯನಾರರಿಗೆ ದರ್ಶನವಿತ್ತು, ಅನುಗ್ರಹಿಸಿ ತನ್ನ ಶ್ರೀಪಾದಗಳ ನೆರಳಿನಲ್ಲಿ ಸೇರಿ ನಿಲ್ಲುವಂತೆ ಅಂಗೀಕರಿಸಿಕೊಂಡು, ಅವರು ತಮ್ಮನ್ನು ಎಡೆಬಿಡದೆ ಕೈ ಮುಗಿದು ಸೇವಿಸುತ್ತಿರುವಂತೆ ಶ್ರೇಷ್ಠ ಭಾಗ್ಯವನ್ನು ದಯಪಾಲಿಸುವನು.

ರಗಳೆಯಲ್ಲಿ ಸೇದಿರಾಜನಲ್ಲಿಗೆ ಸಚಿವನು ಬಂದು ಹರಭಕ್ತನನ್ನು ಕ್ಷೇಮದಿಂದ ಕಳುಹಿಸಿದೆನೆಂದು ಹೇಳಲು ಸಂತೋಷಗೊಂಡ ಸೇದಿರಾಜನು ಅರಸಿಯರು ಸಚಿವರು, ಹರಭಕ್ತರು, ಹಿರಿಯರು, ಮಾನ್ಯರುಗಳನ್ನು ಕರೆಯಿಸಿ ಮೈಮೇಲೆ ಕವಿಸಿಕೊಂಡಿದ್ದ ಮುಸುಕನ್ನು ತೆಗೆಯುವನು. ಬೆನ್ನಲ್ಲಿ ಅಲಗು ನಾಟಿರುವುದನ್ನು ಕಂಡ ಅವರು ದುಃಖಿಸುತ್ತಿರಲು ಕೈ ಸನ್ನೆಯಿಂದ ದುಃಖಿಸಬೇಡವೆಂದು ಹೇಳಿ, ನಾಟಿರುವ ಅಲಗನ್ನು ಹೊರತೆಗೆಯುವಂತೆ ಭಕ್ತನೊಬ್ಬನಿಗೆ ಹೇಳೀ ಕಣ್ಮುಚ್ಚಿ ಚಿತ್ತವನ್ನು ಶಿವಮೂರ್ತಿಯಲ್ಲಿರಿಸಿದನು. ಅಲಗನ್ನು ಹೊರತೆಗೆಯುವ ಆ ದೃಶ್ಯವನ್ನು ನೋಡಲಾರದೆ ಜನರು ಕಣ್ಮುಚ್ಚುವರು. 'ಈಶ ಪ್ರತಿಷ್ಠೆಯ ಶಲಾಕೆಯನುರ್ಚುವ ತೆರದೆ' ಭಕ್ತನು ಅಲಗನ್ನು ಬೆನ್ನಿಂದ ತೆಗೆದನು. ಆಗ ಶಿವ ಮೆಚ್ಚಿ ತನ್ನ ಹೊಸದಾದ ಕೃಪಾವರ್ಷವನ್ನು ಸುರಿಸಿದನು. ಆಗ ಪುಷ್ಪವೃಷ್ಟಿಗಳಾದವು; ದೇವದುಂದುಭಿಗಳು ಮೊಳಗಿದವು. ಗಣಗಳು ಶಿವನ ಪಕ್ಕದಲ್ಲಿ ಸಂತೋಷದಿಂದ ಕುಣಿಕುಣಿದು ನಲಿನಲಿದಾಡುತ್ತಿರಲು, ಶಿವ ಸೇದಿರಾಜನನ್ನು ತೆಗೆದಪ್ಪಿ ಮೈದಡಹುವನು. ಶಿವ ನಂದಿಗೆ ತನ್ನ ಭಕ್ತನ ನಿಷ್ಠೆಯನ್ನು ಹೇಳುತ್ತಿರುವಲ್ಲಿ ಪುಷ್ಪಕಗಳು ಬರುವವು. ಶಿವ ಸೇದಿರಾಜನನ್ನು ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನಿತ್ತು ಗೌರವಿಸುವನು.

ಮೆಱೆಮಿಂಡದೇವರ ರಗಳೆ :

ಪೆರಿಯಪುರಾಣದಲ್ಲಿ ಈ ಪುರಾತನರನ್ನು 'ವಿರನ್ಮಿಂಡನಾಯನಾರ'ರೆಂದು ಕರೆಯಲಾಗಿದೆ. ಅಲ್ಲಿ ಕಥೆ ಮಲೆನಾಡಿನ ವರ್ಣನೆಯಿಂದ ಪ್ರಾರಂಭವಾಗುತ್ತದೆ. ಎರಡನೇ ಪದ್ಯದಲ್ಲಿ ಚೇರರ ಸಿರಿನಾಡಿನ ಊರುಗಳಲ್ಲಿ ಒಂದಾದ ಶೇಙ್ಗನ್ನೂರಿನ ವರ್ಣನೆಯನ್ನು ಮಾಡಲಾಗಿದೆ. ಈ ಊರಿನಲ್ಲಿ ವೇಳಾಳ ಕುಲವನ್ನು ಬೆಳಗುವುದಕ್ಕಾಗಿ ವಿರನ್ಮಂಡನಾಯನಾರರು ಅವತರಿಸಿದರೆಂದು ಹೇಳಲಾಗಿದೆ.

ರಗಳೆಗಳಲ್ಲಿ ಮೆಱೆಮಿಂಡದೇವರು ಸದಾಶಿವನೊಲಿದು ನೆಲಸಿರುವ ಚೋಳದೇಶಕ್ಕೆ ಆಭರಣಪ್ರಾಯವಾದ ತಿರುವಾರೂರೆಂಬ ಹಿರಿಮೆಯ ಪುರವು, ಬೇರೊಂದು ಕೈಲಾಸದಂತೆ ಶೋಭಿಸಿರುವುದೆಂದೂ ಅಲ್ಲಿ ಶಿವನ ಅಪ್ರತಿಮ ಶಿವಭಕ್ತನಾದ ಮೆರೆಮಿಂಡದೇವನಿರುವನೆಂದೂ ಆತ, ಶಿವನನ್ನಲ್ಲದೆ ಯಾರನ್ನೂ ಲೆಕ್ಕಿಸದವನೆಂದು ಹೇಳಲಾಗಿದೆ. ಪೆರಿಯಪುರಾಣದಲ್ಲಿ ವಿರನ್ಮಿಂಡನಾಯನಾರರು ಪರಮೇಶ್ವರನು ನೆಲೆಸಿರುವ ಪವಿತ್ರ ಕ್ಷೇತ್ರಗಳಿಗೆಲ್ಲಾ ಹೋಗಿ ಕೈಮುಗಿದು ನಮಸ್ಕರಿಸಿ ಭಕ್ತಿಮಾರ್ಗದಲ್ಲಿ ನಡೆವವರು; ಭಕ್ತಿಯಲ್ಲಿ ಹಿರಿಮೆಯನ್ನು ಪಡೆದ ಮಹಾಭಕ್ತರು; ತಿರುಕೂಟದ ಎದುರು ಮೊದಲು ನಮಸ್ಕಾರ ಮಾಡುವ ಅನುಗ್ರಹ

ಪಡೆದುಕೊಂಡವರು ಎಂದು ವರ್ಣಿಸಲಾಗಿದೆ. ನಾಯನಾರರು ಮಲೆನಾಡನ್ನು ದಾಟಿ ಎಲ್ಲೆಲ್ಲೂ ಇರುವ ಶಿವಕ್ಷೇತ್ರಗಳಿಗೆ ಹೋಗಿ ಭಕ್ತರುಗಳು ದೃಢವಾದ ನಡವಳಿಕೆಯ ಮಾರ್ಗವನ್ನು ತಪ್ಪದೆ ಅನುಸರಿಸಿ ನಡೆದುಕೊಳ್ಳುವಂತೆ ಮಾಡುತ್ತ ತಿರುವಾರೂರನ್ನು ಬಂದು ಸೇರುವರು. ರಗಳೆಯಲ್ಲಿ 'ಭವನ ನೆನಹಲದೇನುಂ ಬೇರೆ ನೆನಹಿಲ್ಲದ ಸರ್ವೇಂದ್ರಿಯ'ವೂ ಶಿವನಿಗಾಗಿರಲು ಮೆರೆಮಿಂಡದೇವರು ನಿತ್ಯವೂ ಶಿವಾಲಯದ ಲಿಂಗಾರ್ಚನೆಯಲ್ಲಿ ಒಪ್ಪುತ್ತಲಿದ್ದರೆಂದು ಹೇಳಿ ಆ ಭಕ್ತನ ಲಿಂಗಾರ್ಚನಾಕ್ರಮವನ್ನು ಮನಮುಟ್ಟುವಂತೆ ವರ್ಣಿಸಲಾಗಿದೆ.

ಪೆರಿಯಪುರಾಣದಲ್ಲಿ ತಿರುಕೂಟವನ್ನು ವಂದಿಸದೆ ಹೋದ ನಂಬಿಯಣ್ಣನಿಗೂ ಅವನಿಗೆ ಒಡೆಯನಾಗಿರುವ ಪರಮೇಶ್ವರನಿಗೂ 'ತಿರುಕೂಟಕ್ಕೆ ಹೊರಗು' ಎಂದು ಬಹಿಷ್ಕಾರ ಹಾಕಿದ ವಿವರ ತೀರಾ ಸಂಕ್ಷಿಪ್ತವಾಗಿ ಬಂದಿದೆ. ಪೆರಿಯಪುರಾಣದಲ್ಲಿ ಬಹಿಷ್ಕಾರದ ಬಗೆಗೆ ಹೆಚ್ಚಿನ ವಿವರಗಳಿಲ್ಲ. ಹರಿಹರ ಬಹಿಷ್ಕಾರದ ಬಗೆಗೆ ವಿಸ್ತಾರವಾಗಿ ವಿವರಗಳನ್ನು ನೀಡಿರುವನು.

ಪೆರಿಯಪುರಾಣದಲ್ಲಿ ಬಹಿಷ್ಕಾರದ ಬಗೆಗೆ ಹೆಚ್ಚಿನ ವಿವರಗಳಿಲ್ಲದ ಕೊರತೆಯನ್ನು, ಹರಿಹರನ ರಗಳೆಯಿಂದ ತುಂಬಿಕೊಳ್ಳಬಹುದು. ತಿರುನಾಳಿನ ಸಂಭ್ರಮದಲ್ಲಿಯೇ ಬಹಿಷ್ಕಾರದ ಪ್ರಸಂಗ ಬಂದಿದೆ. ತಿರುನಾಳಿನ ವಿಸ್ತಾರವಾದ ವರ್ಣನೆಯಿಂದ ಹರಿಹರನಿಗೆ ತಮಿಳುನಾಡಿನ ಸಾಂಸ್ಕೃತಿಕ ಹಿನ್ನೆಲೆಯ ಪರಿಚಯ ಸಾಕಷ್ಟು ಇತ್ತು ಎಂಬುದು ತಿಳಿಯುತ್ತದೆ. ಹರಿಹರ ತಮಿಳುನಾಡಿನಾದ್ಯಂತ ಸಂಚರಿಸಿ ಶೈವನಾಯನ್ಮಾರರ ಬಗ್ಗೆ ವಿಷಯ ಸಂಗ್ರಹಣೆ ಮಾಡಿರುವಂತೆ ಕಾಣುತ್ತದೆ ಎಂದು ಗ್ರಹಿಸಬಹುದು.

ತಿರುನಾಳಿನ ಸಂಭ್ರಮ ಎಲ್ಲೆಲ್ಲೂ ಆವರಿಸಿರುವಾಗ ಪೊನ್ನಾಂಬಲದ ಸಭೆಯಲ್ಲಿದ್ದ ಮಹಾಗಣಗಳನ್ನು ನೋಡದೆ, ವಂದಿಸದೆ ನಂಬಿಯಣ್ಣ ಮುಂದೆ ಹೋದುದ್ದು ಮೆರೆಮಿಂಡದೇವರ ಕೋಪಕ್ಕೆ ಕಾರಣವಾಯಿತು.

ಘನಮಹಿಮರೆನಿಪ ಭಕ್ತರ್ಗೆರಗದನ ಭಕ್ತಿ
ಕೈಕೊಂಬನೇ ಶಿವಂ ಶರಣಸಂತತಿ ಮುಳಿಯೆ
ಕೈಕೊಂಬನೇ ಹರಂ ಹರನ ವಶವೇ ಕಳಿಯೆ
ಎರಗದೊಡೆ ಬೊಮ್ಮನಂ ಕಂಬವಂ ಮಾಡವರು
ಎರಗಿದೊಡೆ ಕಂಬವಂ ಬೊಮ್ಮನಂ ಮಾಡುವರು
ಮೀರಿದೊಡೆ ಕಾಲನಂ ಕೋಪದಿಂ ಸುಟ್ಟಪರ್
ಮೀರಿದೊಡೆ ಹರಿಗಜಲ ಶಾಪವಂ ಕೊಟ್ಟಪರ್
ಇವನನೇಂ ಬಗೆವರೆ ತೃಣಮಿವಂ ತೆಗೆಯೆಂದು
ಇವನನಾವಂ ಕೊಂದೊಡಂ ಕೊಂದುದೇ ಸಂದು
ದೆನುತೆ ಕಣ್ಣಂಪೇರೆ ಕಯ್ ನಡುಗಿ ಘುಡುಘುಡಿಸಿ

ಕೊನೆಮೀಸೆ ಕೆತ್ತಿ ಭುಗಿಲೆನುತೆ ತನು ಹಳಹಳಿಸಿ
ಹೊಯ್ ಡಂಗುರವನವಂ ಹೊರಗು ಹೊರಗೀ ಸಭೆಗೆ
ಹೊಯ್ ಡಂಗುರವನಾವನಾದೊಡಂ ಹೊರಗೆಮಗೆ

(ಪುಟ ೨೬ ಸಾಲು ೧೧೨-೧೨೪)

ಎಂದು ಮೆರೆಮಿಂಡದೇವನು ಬಹಿಷ್ಕಾರ ಹಾಕುವನು. ಬಹಿಷ್ಕಾರದ ವಾದ್ಯಧ್ವನಿ ಕೇಳಿದ ನಂಬಿಯಣ್ಣ ಬೆದರಿ ಆಪದ್ಬಾಂಧವನಾದ ಶಿವನನ್ನು ಕರೆಯುವನು. ಶಿವ ಪ್ರತ್ಯಕ್ಷನಾಗಿ ಭಕ್ತನನ್ನು ಸಂತೈಸುವನು. ಆಗ ದೇವಾಲಯದ ಬಾಗಿಲುಗಳು ಇದ್ದಕ್ಕಿದ್ದಂತೆ ಮುಚ್ಚಿಕೊಂಡಾಗ ಜನರೆಲ್ಲ ಕೂಗಿಡುತ್ತಿರಲು ಮೆರೆಮಿಂಡದೇವರು ಅದೇನೆಂದು ಕೇಳಲು 'ನಂಬಿಯಣ್ಣನೊಡನೆ ಶಿವ ಹೋಗಲು ದೇವಾಲಯದ ಬಾಗಿಲು ಮುಚ್ಚಿತು. ಹಸು ಹುಲ್ಲನೊಲ್ಲದಿವೆ; ಶಿಶು ಬೆಣ್ಣೆದಿನ್ನದಿವೆ; ಪುರಜನ ಪ್ರಾಣ ನೀಗುತ್ತಿರುವರು' 'ಎಂದು ಭಕ್ತರು ಹೇಳಿದರು. ಈ ಮಾತು ಕೇಳಿ ಕೋಪಗೊಂಡ ಮೆರೆಮಿಂಡದೇವರು–

ಶಿವಭಕ್ತರಂ ಮೀರಿದವನೊಡನೆ ಹೋದನೇ
ಶಿವಭಕ್ತರಂ ನೋಡದವನೊಡನೆ ಹೋದನೇ
ಮತ್ತೆ ಹೊಯಿ ಡಂಗುರವನಿನ್ನೊಮ್ಮೆಯೀಶಂಗೆ
ಮೊತ್ತದ ಗಣಾವಳಿಯನ್ನೊಲ್ಲದ ಮಹೇಶಂಗೆ

( ಪುಟ ೨೭ ಸಾಲು ೧೨೩-೧೨೬)

ಎಂದು ಸರ್ವೇಶ್ವರನಿಗೂ ಬಹಿಷ್ಕಾರ ಹಾಕುವನು. ಆ ಸುದ್ದಿ ಕೇಳಿದ ಶಿವ ನಂಬಿಗೆ–

"ಎನ್ನನೊಳಗಾಗಿ ಹೊರಗೆಂದರಿನ್ನೇಗುವೆಂ
ಇನ್ನೆಂತು ಭಕ್ತರ ನಿರೋಧಮಂ ನೀಗುವೆಂ
ಭಕ್ತರೊಲ್ಲದರೆನ್ನನೊಲ್ವರಾರೈ ನಂಬಿ
ಭಕ್ತರಹಿಯದೊಡೆನ್ನನಹಿವರಾರೆಲೆ ನಂಬಿ
ಭಕ್ತರರ್ಚಿಸದೊಡರ್ಚಿಸುವರಾರೆಲೆ ನಂಬಿ
ಭಕ್ತರಾಗದೊಡೆಯೆನಗಪ್ಪರಾರೆಲೆ ನಂಬಿ
ಭಕ್ತರೀಯ್ಯದೊಡೆನಗೆ ಈವರಾರೆಲೆ ನಂಬಿ
ಭಕ್ತರುಂ ನೋಡದೊಡೆ ನೋಳ್ಪರಾರೆಲೆ ನಂಬಿ"

(ಪುಟ ೨೭ ಸಾಲು ೧೮೫-೧೯೨)

ಎಂದು ಶಿವನೇ ಗೋಳಾಡುವನು. ಶಿವನ ಈ ಗೋಳಾಟವನ್ನು ನೋಡಿ ಶಿವನನ್ನೇ ನಂಬಿದ್ದ ನಂಬಿಯ ಅವಸ್ಥೆ ವರ್ಣಿಸಲಸದಳ. ಮತ್ತೆ ಮಹೇಶ್ವರನೇ, ತನ್ನ ನೆಚ್ಚಿನ ಭಕ್ತನ ಸ್ಥಿತಿ ನೋಡಿ ಮರುಗಿ, ಭಕ್ತರನ್ನು ಹಾಡಿ ಹೊಗಲುವಂತೆ ಪರಿಹಾರವನ್ನು ಸೂಚಿಸುತ್ತಾನೆ.

ಪೆರಿಯಪುರಾಣದಲ್ಲಿ ವಿರನ್ಮಿಂಡ ನಾಯನಾರರು ನಂಬಿ ಹಾಗೂ ಶಿವನಿಗೆ ಬಹಿಷ್ಕಾರ ಹಾಕಲು, ನಂಬಿಯಣ್ಣನು 'ತಿರುತ್ತೊಣ್ಣತ್ತೊಗೈ'ಯನ್ನು ರಚಿಸಿ ಹಾಡಲು ಸಂತೃಪ್ತರಾದರು. ಅನಂತರ ವಿರನ್ಮಿಂಡನಾಯನಾರರು ಎಲ್ಲರೂ ಮೆಚ್ಚುವಂತೆ ಬಹುಕಾಲ ಲೋಕದಲ್ಲಿ ಉತ್ತಮವಾದ ಶೈವ ಧರ್ಮದ ಶ್ರೇಷ್ಠ ಲಕ್ಷಣವಾದ ಅಗ್ರಗಣ್ಯವಾದ ನಡವಳಿಕೆಯ ಮಾರ್ಗವನ್ನು ಕಾಪಾಡುತ್ತ ಶಿವಭಕ್ತರುಗಳಿಗೆ ಸೇವೆ ಮಾಡುವ ಭಾಗ್ಯವನ್ನು ಪಡೆದು ಯೋಗ್ಯ ರೀತಿಯಲ್ಲಿ ಶಿವನ ಕೃಪೆಯಿಂದ ಅವನ ಪಾದಗಳ ನೆರಳಿನಲ್ಲಿ ಗಣನಾಯಕರಾಗುವ ಭಾಗ್ಯ ಪಡೆದರು.
ರಗಳೆಯಲ್ಲಿ ನಂಬಿ ಶಿವನನ್ನು ಕುರಿತು-

................................ ನಾನಾರನಱಿವೆಂ ದೇವ
ಘನಮಹಿಮರಂ ಪಿರಿಯರಂ ಬಲ್ಲನೇ ದೇವ
ಬಲ್ಲಡೇಕೆನಗಿನಿತವಸ್ಥೆಯಾದಪುದೀಶ
ಬಲ್ಲಡೇಕಾದಪ್ಪುದಿನಿತು ಧಾವತಿಯೀಶ
(ಪುಟ ೨೭, ಸಾಲು ೨೧೧-೨೧೪)

ಎಂದು ಹೇಳಲು ಶಿವ ನಂಬಿಯಣ್ಣನಿಗೆ 'ತಂದೆ ಲಾಲಿಸುತೆ ಮಕ್ಕಳ ಪೆಸ ರ್ಗೊಂಬಂತೆ' ತನ್ನ ಪರಮಭಕ್ತರ ದಿವ್ಯ ನಾಮವನ್ನು ಹಿಗ್ಗಿ ಹೇಳತೊಡಗಿದನು. ನಂಬಿಯಣ್ಣನಿಂದ ಶಿವ ಅರುವತ್ತುಮೂವರು ಭಕ್ತರೆಲ್ಲರ ಬಗೆಗೆ ಹಾಡಿಸಿದನು. ಕೋಟಿಸೂರ್ಯ ಪ್ರಭೆಗಳೊಡನೆ ಶಿವ ನಂಬಿಯೊಡನೆ ಬರುತ್ತಿರಲು ಆ ಮಹಾಬೆಳಕು ಭಕ್ತಸಭೆಯನ್ನು ಕವಿಯಿತು. ಎಲ್ಲಿಯ ಮಹಾಬೆಳಗಿದು? ಎಂದು ಮೆರೆಮಿಂಡದೇವನು ಕೇಳಲು ನಂಬಿಯೊಡನೆ ಬರುವ ಶಿವನ ಬೆಳಗಿದು, ಮುಂದೆ ಬರುವಾತ ನಂಬಿ, ಹಿಂದೆ ಬರುತ್ತಿರುವಾತ ಶಿವ ಎಂದು ಭಕ್ತರು ಹೇಳುವರು. ಮೆರೆಮಿಂಡನು ವಿಸ್ಮಿತನಾಗಿ 'ಇನಿತೊಲಿದನೇ ನಂಬಿಗೆನುತೆ ತಲೆಯಿಂ ತೂಗಿ' ತಮ್ಮ ದುಡುಕಿಗೆ ನೊಂದು, ತಾನು ನಂಬಿ-ಶಿವರಿಗೆ ಬಹಿಷ್ಕರ ಹಾಕಿದುದು ಸರಿಯಿಲ್ಲವೆಂಬ ಭಾವನೆ ಮೆರೆಮಿಂಡದೇವನ ಮನದಲ್ಲಿ ಮೂಡಿ ಮಿಡುಕಿ, ಇನ್ನು ತನ್ನದು ಬೀಳುಬಾಳು; ತಾನು ಅಪರಾಧಿ ಎನ್ನುತ್ತ ತನ್ನನ್ನು ತಾನೆ ಕಡಿದುಕೊಳ್ಳಲು ಕತ್ತಿಯನ್ನೆತ್ತಿದನು. ಅಷ್ಟರಲ್ಲಿ ಶಿವ, 'ಎನ್ನಾಣೆ ಎನ್ನಾಣೆ ಬೇಡಬೇಡ' ಎನ್ನುತ ಬಂದು ಅವನ ಕೈಯಲ್ಲಿದ್ದ ಕತ್ತಿಯನ್ನು ಕಿತ್ತು ಬಿಸಾಡಿ, ಅವನನ್ನು ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನಿತ್ತ.

ಪೆರಿಯಪುರಾಣದಲ್ಲಿ ನಂಬಿ ಹಾಗೂ ಶಿವನಿಗೆ ಭಕ್ತಮಂಡಲಿಯಿಂದ ಹೊರಗೆಂದು ಬಹಿಷ್ಕಾರ ಹಾಕಿದುದು ನಂಬಿ 'ತಿರುತ್ತೊಣ್ಣತ್ತೊಗೈ'ಯನ್ನು ರಚಿಸಿ ಹಾಡಿದ ಮೇಲೆ ತೆಗೆಯಲ್ಪಡುತ್ತದೆ. ಅಲ್ಲಿಗೆ ಭಕ್ತನ ಕಥೆ ಮುಗಿಯುತ್ತದೆ. ಆದರೆ ಹರಿಹರ ಆ ಕಥೆಯನ್ನು ಇನ್ನಷ್ಟು ಎಳೆದಿದ್ದಾನೆ. ಔಚಿತ್ಯಪೂರ್ಣವಾದ ಈ ಪ್ರಸಂಗ ಹರಿಹರನ ಸ್ವಂತ ಕಲ್ಪನೆ: ಸೃಷ್ಟಿ.

ಅಮರನೀತಿನಾಯನಾರರ ರಗಳೆ :

ಪೆರಿಯಪುರಾಣದ ಪ್ರಕಾರ ಅಮರನೀತಿನಾಯನಾರರು ತಿರುಪ್ಪೈಯಾಪ್ಪೈ ನಗರದ ವರ್ತಕರ ಕುಲದಲ್ಲಿ ಹುಟ್ಟಿದವರು ವ್ಯಾಪಾರವಹಿವಾಟಿನಲ್ಲಿ ಎಲ್ಲರಿಗಿಂತಲೂ ಮಿಗಿಲಾದವರು. ಶಿವನ ನಿಷ್ಠಾವಂತ ಭಕ್ತರಾದ ಇವರು ಶಿವಭಕ್ತರಿಗೆ ವಾಸಕ್ಕೆ ಛತ್ರ; ಉಡಲು, ಹೊದೆಯಲು ವಸ್ತ್ರ; ಹಸಿವು ತೀರಲು ಆಹಾರ – ಇವನ್ನು ಒದಗಿಸುವುದೇ ತಮ್ಮ ಪವಿತ್ರ ಕರ್ತವ್ಯವೆಂದು, ಅದು ಸಂಪತ್ತಿನ ಸದ್ವಿನಿಯೋಗವೆಂದು ಭಾವಿಸಿದ್ದರು. ಪರಮೇಶ್ವರನು ನೆಲಸಿರುವ ತಿರುನಲ್ಲೂರೆಂಬ ಕ್ಷೇತ್ರದಲ್ಲಿ ಬಹಳ ವೈಭವದಿಂದ ನಡೆಯುವ ಉತ್ಸವಕ್ಕೆ ಬಹು ಪ್ರೀತಿಯಿಂದ ಹೋಗಿ ದರ್ಶನ ಮಾಡಿಕೊಂಡು, ಶಿವಭಕ್ತರು ಊಟಮಾಡಲು ಅನುಕೂಲವಾಗುವಂತೆ ಛತ್ರವನ್ನು ಕಟ್ಟಿಸಿರುವರು. ಅಲ್ಲಿ ಆನಂದದಿಂದ ಅವರಿರುತ್ತಿರಲು ಶಿವ, ತನ್ನ ಭಕ್ತನಿಗೆ ಅನುಗ್ರಹ ಮಾಡಲು ಬ್ರಾಹ್ಮಣ ಬ್ರಹ್ಮಚಾರಿಯ ವೇಷ ಧರಿಸಿ ಬರುವನು.

ರಗಳೆಯ ಪ್ರಕಾರ ಅಮರನೀತಿಯು ಚೋಳದೇಶದ ತಿರುನಲ್ಲೂರಿನಲ್ಲಿ ಸಂತೋಷದಿಂದಿರಲು ಒಮ್ಮೆ ಶಿವನನ್ನು ಪೂಜಿಸುವ ಬಯಕೆಯಾಗಿ, ವಸ್ತ್ರವಿತ್ತರೆ ಮಹೇಶನಿಂದ ಭಕ್ತಿ ಬರುವುದೆಂದು ನಂಬಿ, ತನ್ನ ಮಗನನ್ನು ವ್ಯವಹಾರದಲ್ಲಿರಿಸಿ ಈಶ್ವರಾಲಯಕ್ಕೆ ಬಂದು ನಮಸ್ಕರಿಸಿ ಶಿವಲಿಂಗಕ್ಕೆ ಬಗೆಬಗೆಯ ಪೂಜೆ ಮಾಡಲು ಅಣಿಮಾಡಿ, ನಾನಾ ಬಗೆಯ ವಸ್ತ್ರಗಳನ್ನು ತರಿಸಿ ಅವನ್ನು ಲಿಂಗಕ್ಕೆ ಅರ್ಪಿಸಿ ಶಿವನನ್ನು ಮನದುಂಬಿ ಅರ್ಚಿಸುವನು. ಅಲ್ಲಿಗೆ ನೆರೆದು ಬಂದ ಗಣಗಳನ್ನು ಆದರಿಸಿ ಅವರು ಬಯಸಿದುದನ್ನು ಕೊಡುತ್ತಾ ಹಲವು ವರ್ಷ ಕಳೆಯುವನು. ಅಮರನೀತಿ ಭಕ್ತರಿಗೆ ಮಾಡಿದ ದಾನವು ಕೈಲಾಸಕ್ಕೂ ಪಸರಿಸಿ ಹಬ್ಬಿತೆಂದೂ ವಿರೂಪಾಕ್ಷನು ಆಶ್ಚರ್ಯಹೊಂದಿ, ಅಮರನೀತಿಯ ಭಕ್ತಿಯನ್ನು ಅಳೆದು ನೋಡುವೆನೆಂದು, ಶತವೃದ್ಧ ಭಾವವನ್ನು ಧರಿಸಿ ತಿರುನಲ್ಲೂರ ಶಿವದೇವಾಲಯಕ್ಕೆ ಬರುವನು.



ಪೆರಿಯಪುರಾಣದಲ್ಲಿ ಬ್ರಹ್ಮಚಾರಿಯಾಗಿ ವೇಷಧರಿಸಿ ಬಂದ ಶಿವನ ವರ್ಣನೆ ಮೂರು ಪದ್ಯಗಳಲ್ಲಿ ಸೊಗಸಾಗಿ ಬಂದಿದೆ. ರಗಳೆಯಲ್ಲಿ ವೃದ್ಧನ ವೇಷ ಧರಿಸಿ ಬಂದ ಶಿವನ ವರ್ಣನೆ–

ಎಳಲ್ವ ಕಿವಿ ತೆರೆಮೊಗಂ ಜೋಲ್ವ ಪುರ್ವಿಂದೆಸೆಯೆ
ನಳಿತ ಬೆನ್ ಲಾತವಕೋಲ್ತುದಿಯ ಕೋವಣವೆಸೆಯೆ

(ಪುಟ ೩೦ ಸಾಲು ೧೦೭–೧೦೮)

ಎಂದು ಎರಡೇ ಎರಡು ಸಾಲುಗಳಲ್ಲಿ ಮುಗಿದಿದೆ. ಪೆರಿಯಪುರಾಣದಲ್ಲಿ ಬ್ರಹ್ಮಚಾರಿಯು ಅಮರನೀತಿ ನಾಯನಾರರನ್ನು ಅವರು ಕಟ್ಟಿಸಿದ ಛತ್ರದಲ್ಲಿ ಬಂದು ಕಾಣುವರು. ರಗಳೆಯಲ್ಲಿ ಶಿವಾಲಯದಲ್ಲಿ ವೃದ್ಧ ವೇಷಧರಿಸಿದ ಶಿವ ಬಂದು ಕಾಣುವನು. ಪೆರಿಯಪುರಾಣದಲ್ಲಿ ತಮ್ಮಲ್ಲಿಗೆ ಬಂದ ಬ್ರಹ್ಮಚಾರಿಯನ್ನು ಅಮರನೀತಿನಾಯನಾರರು ಸತ್ಕರಿಸಲು, ಶಿವ ಅವರ ದಾನಕಾರ್ಯಗಳನ್ನು ಪ್ರಶಂಸಿಸಿ ನಿಮ್ಮ ವಿಚಾರವನ್ನು ಕೇಳಿ ನಿಮ್ಮನ್ನು ಕಾಣಲು ಬಂದ್ದಿದ್ದೇವೆ ಎನ್ನುವನು.

ನಾಯನಾರರು ಬ್ರಹ್ಮಚಾರಿಯನ್ನು ತಮ್ಮಲ್ಲಿಯೇ ಭೋಜನ ಮಾಡಿ ಅನುಗ್ರಹಿಸಬೇಕೆಂದು ವಂದಿಸುವರು. ಬ್ರಹ್ಮಚಾರಿಯು ಅದಕ್ಕೆ ಪವಿತ್ರವಾದ 'ಪೊನ್ನಿ' ನದಿಯಲ್ಲಿ ಸ್ನಾನಮಾಡಿ ಬರುತ್ತೇನೆ. ಒಂದು ವೇಳೆ ಮಳೆ ಬಂದರೂ ಒಣಗಿದ ಕೌಪೀನವನ್ನು ನೀವು ಭದ್ರವಾಗಿಟ್ಟುಕೊಂಡಿದ್ದು ನನಗೆ ಕೊಡಿ ಎಂದು ಹೇಳಿ, ಒಂದು ಬೆಳ್ಳನೆಯ ಕೌಪೀನವನ್ನು ತಮ್ಮ ಪಲಾಶದಿಂದ ಬಿಚ್ಚಿಕೊಟ್ಟು ಸ್ನಾನಮಾಡಿ ಬರಲು ತೆರಳುವರು. ನಾಯನಾರರು ಬ್ರಹ್ಮಚಾರಿ ಕೊಟ್ಟ ಆ ಕೌಪೀನವನ್ನು ಪ್ರತ್ಯೇಕವಾದ ಒಂದು ಸ್ಥಳದಲ್ಲಿ ಸುರಕ್ಷಿತವಾಗಿಡುವರು.

ರಗಳೆಯಲ್ಲಿ ನದಿಯ ಪ್ರಸ್ತಾಪವೇ ಆಗಲಿ, ಸ್ನಾನದ ಪ್ರಸ್ತಾಪವೇ ಆಗಲಿ ಬರುವುದಿಲ್ಲ. ಅಮರನೀತಿಯು ನೆರೆದ ಗುಣಕುಲಕ್ಕೆ ಬೇಡಿದುದನ್ನಿತ್ತು, ಎಲ್ಲರನ್ನೂ ಕಳುಹಿಸಿ ಅಕ್ಕಪಕ್ಕವನ್ನು ನೋಡಲು ವೃದ್ಧಭಕ್ತ ಕಣ್ಣಿಗೆ ಬೀಳುವನು. ಅಮರನೀತಿ ಕೊಡುವೆನೆಂದ ವಸ್ತುಗಳನ್ನೆಲ್ಲಾ ತಿರಸ್ಕರಿಸಿದ ವೃದ್ಧನು –

................ ಏನುವಂ ಬೇಡಿ ಬಂದವರಲ್ಲ
ಮನದೊಳಂ ಮನುಜರನಪೇಕ್ಷೆಗೆಯ್ವವರಲ್ಲ
ಶರಣರ್ಗೆ ನೀನೀವುದಂ ನೋಡಲಲ್ತಿಯಿಂ
ನಿರುತದಿಂ ಕೇಳಿ ಬಂದೆವು ನಿನ್ನ ವಾರ್ತೆಯಿಂ
ಇಲ್ಲಿ ಎಮಗೊರ್ಬ ಭಕ್ತರ ಮನೆಯತಾತಣಂ
ಎಲ್ಲಿ ಇರಿಸುವನಿಂತು ತೊಡಕಾಯ್ತು ಕೋವಣಂ
ಈ ಕೌಪನಿಂದು ಬೈತಿಟ್ಟು ಕೊಡು...................

(ಪುಟ ೩೧, ಸಾಲು ೧೭೧–೧೭೭)

ಎಂದು ಹೇಳಿ ಕೊಡುವನು. ಅಮರನೀತಿ ಅದನ್ನು ತನ್ನ ಕಡೆಯವನೊಬ್ಬನ ಕೈಯಲ್ಲಿ ಕೊಡಲು, ಆಗ ವೃದ್ಧನು 'ಮತ್ತೊಬ್ಬರನು ನಂಬದೆ ನಿನಗೆ ಕೊಡಲು ಬೇರೆಯೊಬ್ಬರ ಕೈಯಲ್ಲಿ ಇರಿಸುವರೆ?' ಎಂದು ಅದರ ಮಹಿಮೆಯನ್ನು ತಿಳಿದು ಹೇಳಿ, ಜೋಪಾನವಾಗಿರಿಸುವಂತೆ ಎಚ್ಚರಿಸಿ ಹೋಗುವನು. ಸಿರಿಮಠ ಕಟ್ಟಿಸಿದ ಪ್ರಸ್ತಾಪ ಇಲ್ಲಿ ಬರುವುದಿಲ್ಲ.

ಪೆರಿಯಪುರಾಣದಲ್ಲಿ ಬ್ರಹ್ಮಚಾರಿಯ ವೇಷದ ಶಿವನು, ನಾಯನಾರರು ಭದ್ರಪಡಿಸಿದ್ದ ಕೌಪೀನವನ್ನು ಆ ಸ್ಥಳದಿಂದ ಮರೆಯಾಗಿ ಹೋಗುವಂತೆ ಮಾಡಿ, ಎಡೆಬಿಡದೆ ಸುರಿವ ಮಳೆಯಲ್ಲಿ ಛತ್ರಕ್ಕೆ ಬಂದು 'ನೀರಿನಲ್ಲಿ ಮುಳುಗಿದುದರಿಂದ ಒದ್ದೆಯಾಗಿರುವ ಕೌಪೀನವನ್ನು ಬದಲಾಯಿಸಿಕೊಳ್ಳೋಣವೆಂದರೆ ದಡದ ಮೇಲಿರುವುದು ಒದ್ದೆಯಾಗಿದೆ. ಆದ್ದರಿಂದ ನಾನು ನಿಮ್ಮ ವಶಕೊಟ್ಟಿದ್ದ ಕೌಪೀನವನ್ನು ತೆಗೆದುಕೊಂಡು ಬನ್ನಿ' ಎಂದು ಹೇಳುವನು. ಕೌಪೀನ ಕಾಣುವುದಿಲ್ಲ. ಎಷ್ಟು ಹುಡುಕಿದರೂ ಸಿಗುವುದಿಲ್ಲ. ಅಪವಾದವನ್ನು ಹೋಗಲಾಡಿಸಿ ಕೊಳ್ಳುವುದು

ಹೇಗೆಂದು ಯೋಚಿಸಿ, ಹೊಸದಾದ ಬೇರೆಯ ಕೋವಣವನ್ನು ತೆಗೆದುಕೊಂಡು ಬಂದು ನಡೆದುದ್ದನ್ನು ಹೇಳಿ, ಒದ್ದೆಯ ಕೌಪೀನವನ್ನು ಕಳಚಿ ಅದಕ್ಕೆ ಬದಲಾಗಿ ಬೇರೊಂದನ್ನು ಧರಿಸಿ ತಮ್ಮ ತಪ್ಪನ್ನು ಮನ್ನಿಸುವಂತೆ ಬೇಡುವರು. ಬ್ರಹ್ಮಚಾರಿಯ ಕೋಪವನ್ನು ಕಂಡು ಅಮರನೀತಿನಾಯನಾರರು ತಮ್ಮ ತಪ್ಪನ್ನು ಕ್ಷಮಿಸಬೇಕೆಂದು ಕಾಲಿಗೆ ಬೀಳುವರು. 'ನಾನು ಕಟ್ಟಿಕೊಳ್ಳುವ ಕೌಪೀನಕ್ಕೆ ಸರಿದೂಗುವ ಒಂದು ಕೌಪೀನವನ್ನು ಕೊಟ್ಟರೆ ಸಾಕು ಎಂದು ಬ್ರಹ್ಮಚಾರಿ ತನ್ನ ಪಲಾಶದಂಡಕ್ಕೆ ಕಟ್ಟಿದ್ದ ಕೌಪೀನವನ್ನು ಬಿಚ್ಚಿ ಕೊಡುವನು. ತಕ್ಕಡಿಯ ಒಂದು ತಟ್ಟೆಯಲ್ಲಿ ಕೌಪೀನ, ಇನ್ನೊಂದು ತಟ್ಟೆಗೆ ಆ ಮೊದಲೇ ಕೂಡಿಟ್ಟಿದ್ದ ಕೌಪೀನಗಳನ್ನು ಹಾಕಲಾಯಿತು. ಅಮೂಲ್ಯ ವಸ್ತುಗಳ ಮೂಟೆ, ಚಿನ್ನ, ಬೆಳ್ಳಿ, ನವರತ್ನಗಳ ರಾಶಿ ಹಾಕಿದರೂ ತಟ್ಟೆ ಮೇಲೆದ್ದು ಸಮತೂಗಲಿಲ್ಲ. ಕೊನೆಗೆ ಅಮರನೀತಿ ದಂಪತಿಗಳು, ಮತ್ತು ಮಗ ತಕ್ಕಡಿಗೆ ಪ್ರದಕ್ಷಿಣೆ ಮಾಡಿ 'ವಿಭೂತಿ ಧರಿಸಿದ ಮೈಯುಳ್ಳ ಶಿವಭಕ್ತರಿಗೆ ನಿಜವಾದ ಪ್ರೀತಿಯಿಂದೊಡಗೂಡಿ ಸೇವೆ ಸಲ್ಲಿಸುವುದರಲ್ಲಿ ಇದುವರೆವಿಗೂ ನಾವು ತಪ್ಪದೆ ಇರುವೆವಾದ ಪಕ್ಷದಲ್ಲಿ ತಕ್ಕಡಿ ಸರಿತೂಗಲಿ' ಎಂದು ತಟ್ಟೆಯಲ್ಲಿ ಏರಿ ಕುಳಿತರು. ತಕ್ಕಡಿ ಸಮತೂಗಿತು. ಬ್ರಹ್ಮಚಾರಿ ವೇಷದ ಶಿವ ಉಮೆಯೊಡನೆ ಕಾಣಿಸಿಕೊಂಡು ಅಮರನೀತಿ ನಾಯನಾರರೂ ಅವರ ಕುಟುಂಬದವರನ್ನು ಕೈಲಾಸಕ್ಕೆ ಕರೆದುಕೊಂಡು ಹೋದ.

ರಗಳೆಯಲ್ಲಿ ವೃದ್ಧ ವೇಷದ ಶಿವ ಕೋವಣವನ್ನು ಅಮರನೀತಿಯಲ್ಲಿ ಕೊಟ್ಟು ಹೋದ ಮರುದಿನವೇ, ದೇವಾಲಯದ ರಂಗಮಂಟಪದಲ್ಲಿ ಭಕ್ತಗಣಗಳ ನಡುವೆ ಕುಳಿತ ಅಮರನೀತಿಯಲ್ಲಿಗೆ ಬಂದು, ಅದನ್ನು ಹಿಂತಿರುಗಿಸುವಂತೆ ಕೇಳುವನು. ಕೌಪೀನ ಕಾಣುವುದಿಲ್ಲ, ಅದರ ಬದಲಿಗೆ ನಾಲ್ಕೈದು ಪಟ್ಟಾವಳಿಯನ್ನು ಕೊಟ್ಟರೂ ಸ್ವೀಕರಿಸದೆ ಕೂಗಾಡುವನು. ಸಾವಿರ ಹೊನ್ನಿನ ಕೌಪೀನವನ್ನು ಸಂತೋಷದಿಂದಿತ್ತು ಭಕ್ತನ ಮನದ ಮುನಿಸನ್ನು ಬಿಡಿಸೋಣ ಎಂದು ಎಲ್ಲರೂ ಒಟ್ಟಾಗಿ ತೀರ್ಮಾನಿಸಿ, ತಮ್ಮ ಅಭಿಪ್ರಾಯವನ್ನು ಹುಸಿವೇಷದ ಶಿವನಿಗೆ ತಿಳಿಸುವರು. ಆಗ ವೃದ್ಧವೇಷದ ಶಿವ ಇನ್ನೂ ಕೂಗಾಡುವನು. ಆಗ ಅಮರನೀತಿ–

ಕೊಟ್ಟರಿವರೊಂದು ಕಾಪಂ ಕೊಂಡೆ ವಾನದಂ
ಕೆಟ್ಟುದಪರಾಧಿಯಾನಿಂತಿದಕೆ ತಕ್ಕುದಂ
ಮಾಡುವರಿವರ್ಮಾಡಿಸಿಯೆ ಕೊಂಬೆ ನಾನೆಂದು
ಕಾಡುವರಿವರ್ಕಾಡಿಸಿಯೆ ಕೊಂಬೆ ನಾನೆಂದು
ನೀವೆಲ್ಲರುಂ ಬಳಲ್ದಿರಿ ಹಸಿದಿರೆಂದೆನುತೆ
ಆವವರ್ಮಾಡಿದಂತಾದಪ್ಪವೆಂದೆನುತೆ

(ಪುಟ ೩೨,೩೩, ಸಾಲು ೯೩-೯೮)

ಭಕ್ತರುಗಳನ್ನು ಸಮಾಧಾನ ಪಡಿಸುವನು. ವೃದ್ಧ ವೇಷದ ಶಿವ 'ಎಮ್ಮ ಮಾಟುಡುಗೆಗೌಪು ಬೇರೆಯಿದೆ. ಮತ್ತೊಂದು ಇದರ ತೂಕಕ್ಕೆ ಸರಿತೂಕವಿತ್ತಡೆ ಸಾಲ್ವುದು' ಎಂದನು. ತ್ರಾಸನ್ನು ತರಿಸಲಾಯ್ತು. ಕೋವಣದ ಭಾರಕ್ಕೆ ಹಲ್ಲೆಗಳೊಡೆದು ನುಚ್ಚುನೂರಾದವು. ದೊಡ್ಡ ತಕ್ಕಡಿಯೊಂದನ್ನು ತರಲು ಅದೂ ನುಚ್ಚುನೂರಾಯಿತು. ಕೊನೆಗೆ ಬಲಿಷ್ಟವಾದ ತಕ್ಕಡಿಯೊಂದನ್ನು ತರಿಸಿ ಒಂದು ತಟ್ಟೆಯಲ್ಲಿ ಕೌಪೀನ, ಧನ ಕನಕ ವಸ್ತುಗಳು– ಹೀಗೆ ಒಂದೊಂದಾಗಿ ತಂದು ಇಟ್ಟರೂ ತಟ್ಟೆಗಳು ಸಮನಾಗಲಿಲ್ಲ. ಕೊನೆಗೆ ಮಗನನ್ನೂ. ಪತ್ನಿಯನ್ನೂ ಏರಿಸಿದರೂ ಸರಿದೂಗದಿರಲು, ಭಕ್ತರಿಗೆ ವಂದಿಸಿ, ಅಮರನೀತಿ ತಾವೂ ಏರಲು ಸಮತೂಕವಾಯ್ತು. ಆಗ ಹೂಮಳೆಗರೆದವು, ಮಂಗಳವಾದ್ಯಗಳು ಉಗ್ಗಡಿಸಿದವು. ದೇವಗಣಗಳು ಬಂದರು. ಶಿವ ತನ್ನ ಭಕ್ತನನ್ನು ನಂದೀಶನ ಮುಂದೆ ಹಾಡಿ ಹೊಗಳಿ, ಎಲ್ಲರನ್ನೂ ಕೈಲಾಸಕ್ಕೆ ಕರೆದುಕೊಂಡು ಹೋದ.

ಕಣ್ಣಪ್ಪನ ರಗಳೆ :

ಹರಿಹರನು ಕಣ್ಣಪ್ಪನ ರಗಳೆಯ ಕಥಾರಂಭವನ್ನು –
ಚೋಳಮಂಡಲವದರೊಳೆಸೆವೊಂದು ಪಟ್ಟಣಂ
ಕೇಳ ತಿರುಕಾಳತ್ತಿ ಎಂದೆನಿಪಂ ಪಟ್ಟಣಂ
ಅಲ್ಲಿಪ್ಪನೊರ್ವ ಶಬರಾಧಿನಾಥ ನೋಡೆ
ಎಲ್ಲಾ ಪುಳಿಂದರ್ಗೆನಾಯಕಂ ತಾ ನೋಡೆ
ಪೆಸರೆಸೆವ ಕಣ್ಣಪ್ಪನೆಂದೆಂಬುದಾತಂಗೆ (ಪುಟ ೪೪, ಸಾಲು ೩–೮)

ಎಂಬ ಪರಿಚಯದಿಂದ ಮಾಡಿರುವನು. ಪೆರಿಯಪುರಾಣದಲ್ಲಿ ಪೊತ್ತಪ್ಪಿನಾಡಿನಲ್ಲಿ, ತಿರುಕಾಳತ್ತಿ ಎಂಬ ಹೆಸರಿನ ಪಟ್ಟಣ. ಆ ಪಟ್ಟಣಕ್ಕೆ ಉಡುಪ್ಪೂರು ಎಂಬ ಗ್ರಾಮವೊಂದು ಸೇರಿದ್ದಿತು. ಆ ಗ್ರಾಮದ ಸುತ್ತಮುತ್ತಲು ಜಲಪಾತಗಳೂ ಕಾಡು ಬೆಟ್ಟಗಳೂ ವನಮೃಗಗಳೂ ಇದ್ದವು. ಅಲ್ಲಿ ಬೇಡರು ವಾಸಮಾಡಿಕೊಂಡಿದ್ದರು. ಆ ಬೇಡರ ಅಧಿಪತಿಯ ಹೆಸರು ನಾಗನ್. ಅವನಿಗೆ ತತ್ತಯ್ ಎಂಬ ಹೆಸರಿನ ಹೆಂಡತಿ ಇದ್ದಳು. ಮುರುಗನ ಕೃಪೆಯಿಂದ ಬಹಳ ದಿನಗಳ ಮೇಲೆ ಆಕೆ ಗಂಡು ಮಗುವನ್ನು ಹೆತ್ತಳು. ಹುಟ್ಟಿದ ಮಗು ಭಾರವಾಗಿದ್ದುದರಿಂದ ಅದಕ್ಕೆ ತಿಣ್ಣನ್(ತಿಣ್ = ಭಾರ) ಎಂದು ಹೆಸರಿಟ್ಟರು.

ಕಣ್ಣಪ್ಪನ ತಂದೆ-ತಾಯಿಗಳು, ಆತನ ಹಿಂದಿನ ಹೆಸರಿನ ಪ್ರಸ್ತಾಪ ರಗಳೆಯಲ್ಲಿ ಕಂಡುಬರುವುದಿಲ್ಲ. ಪೆರಿಯಪುರಾಣದಂತೆ ಸುತ್ತು ಬಳಸುಗಳನ್ನೆಲ್ಲ ಕೈಬಿಟ್ಟು ಹರಿಹರ ನೇರವಾಗಿ ಕಥಾರಂಭ ಮಾಡಿರುವನು.

ಪುರಾಣದ ಪ್ರಕಾರ ತನ್ನ ಕುಲಕ್ಕೆ ಸ್ವಾಭಾವಿಕವಾದ ರೀತಿಯಲ್ಲಿ ತಿಣ್ಣನ್ ತಂದೆಯ ಅಪ್ಪಣೆಯನ್ನು ಪಡೆದು ಬೇಟೆಗೆ ಹೊರಟನು. ನಾಣನ್, ಕಾಡನ್ ಎಂಬ ತನ್ನಿಬ್ಬರು ಬೇಡಗೆಳೆಯರು ತೋರಿದ ಒಂದು ಕಾಡು ಹಂದಿಗೆ ತಿಣ್ಣನು ಬಾಣಬಿಟ್ಟು

ಕೊಂದನು. ಕಾಡನ್ ಅದನ್ನು ತೊಳೆಯಲು ಬೆಟ್ಟದ ಕೆಳಗಡೆ ಹರಿಯುತ್ತಿದ್ದ ಸ್ವರ್ಣಮುಖಿ ನದಿಯ ಬಳಿಗೆ ಕೊಂಡೊಯ್ದನು. ನಾಣ ಮತ್ತು ತಿಣ್ಣರು ಬೆಟ್ಟದ ಮೇಲಿನ ದೇಗುಲವನ್ನು ಸೇರಿದರು. ಬೆಟ್ಟವನ್ನೇರಿ ದೇವಸ್ಥಾನದ ಬಳಿಗೆ ಬಂದಾಗ ಕಣ್ಣಪ್ಪ ಶಿವಲಿಂಗವನ್ನು ನೋಡಿ ತಬ್ಬಿಕೊಂಡು 'ಶಿವನೇ, ನಿನಗಾರು ಬಂಧುಗಳು? ಈ ಕಾಡಿನಲ್ಲಿ ನೀನೊಬ್ಬನೆ ಹೇಗೆ ಇರುವೆ?' ಎಂದು ಪ್ರಲಾಪಿಸುತ್ತಾ 'ನಿನ್ನನ್ನು ನಾನು ಬಿಟ್ಟು ಹೋಗುವುದಿಲ್ಲ. ಈಗ ನಿನಗೆ ಹಸಿವಾಗಿದೆಯಲ್ಲವೆ? ತಾಳು, ಆಹಾರವನ್ನು ತರುತ್ತೇನೆ' ಎಂದು ಹೇಳಿ ನಾಣನನ್ನು ಕರೆದುಕೊಂಡು ಬಂದು ಮಾಂಸವನ್ನು ಬೆಂಕಿಯಲ್ಲಿಟ್ಟು ಚೆನ್ನಾಗಿ ಬೇಯಿಸಿ, ಬಾಣದ ತುದಿಯಿಂದ ಅದನ್ನು ಬಿಡಿಸಿದನು. ಅದು ರುಚಿಯಾಗಿದೆಯೊ ಇಲ್ಲವೊ ಎನ್ನುವುದನ್ನು ತಿಳಿಯಲು ಕಡಿದು ನೋಡಿದನು. ಆಮೇಲೆ ರುಚಿ ತಿಳಿದು ಒಣಗಿದ ಎಲೆಗಳಿಂದ ರಚಿತವಾದ ದೊನ್ನೆಯಲ್ಲಿರಿಸಿದನು. ನಾಣ ಕಾಡರು ಬೇಡವೆಂದರೂ ಕೇಳದೆ, ಶಿವನಿಗೆ ಅರ್ಪಿಸಲು ಆಹಾರದ ದೊನ್ನೆಯನ್ನು ಅವನ ಸಿರಿಮುಡಿಗೆಂದು ಹೂವನ್ನು ತನ್ನ ಜುಟ್ಟಿನಲ್ಲಿಯೂ, ಕುಡಿಯಲು ನೀರನ್ನು ತನ್ನ ಬಾಯಲ್ಲಿಯೂ ಇಟ್ಟುಕೊಂಡು ಹೊರಟನು. ಬಂದು ಶಿವನ ಮುಂದೆ 'ದೇವರೇ ಸ್ವೀಕರಿಸು' ಎಂದು ಬೇಡಿಕೊಳ್ಳುವ.

ರಗಳೆಯಲ್ಲಿ ನಾಣನ್ ಮತ್ತು ಕಾಡನ್ ಎಂಬಿಬ್ಬರು ಕಣ್ಣಪ್ಪನ ಮಿತ್ರರ ಬಗ್ಗೆ ಉಲ್ಲೇಖವಿಲ್ಲ. ಕಣ್ಣಪ್ಪ ಹುಟ್ಟಿ ಬೆಳೆದು ಬೇಟೆಯಾಡಲು ಕಲಿತು ಮೊದಲನೆಯ ಬಾರಿಗೆ ಬೇಟೆಯಾಡಲು ಹೋದನೆಂದು ಹೇಳುವ ಪೆರಿಯಪುರಾಣದ ಈ ವಿವರಗಳು ರಗಳೆಯಲ್ಲಿ ಕಾಣುವುದಿಲ್ಲ.

ರಗಳೆಯಲ್ಲಿ ಕಣ್ಣಪ್ಪನ ಬೇಟೆಯ ವೇಷ ಭೂಷಣದ ವರ್ಣನೆ ವಿಸ್ತಾರವಾಗಿ ಬಂದಿದೆ.

ಜುಂಜದೆಲೆ ಕೆಂಗಣ್ಣ ಗುಂಜಾಭರಣವೆಸೆಯೆ
ರಂಜಿಸಲು ತೊಟ್ಟ ಕರಿಯರೆಗುಪ್ಪಸಂ ತಾ ಮೆಱೆಯೆ
ತಲೆಯುರದ ಕರದ ಕವಡಿಕೆಯ ದಂಡೆಗಳೆಸೆಯೆ
ನಲಿದು ಬಿಗಿದುಟ್ಟ ತೊಗಲುಡಿಗೆಯಲಗುಗಳೆಸೆಯೆ
ಮೊಗದೊಳೊಪ್ಪುವ ವಿಭೂತಿ ತುಂತುರುಗಳೆಸೆಯೆ
ನೆಗದು ಕಟ್ಟಿದ ನೆತ್ತಿಗನ್ನಡಿ ಕರಂ ಹೊಳೆಯೆ
ಹಿಡಿದ ಬಿಲ್ಲೆಡಗಯ್ಯೊಳೊಪ್ಪಿ ತೋಱುತ್ತಮಿರೆ
ನಿಡಿದಾಗಿ ಬೆನ್ನೊಳಿಳುಹಿದ ಚಮರಿಯೊಪ್ಪುತಿರೆ

(ಪುಟ ೪೪ ಸಾಲು ೨೫-೩೨)

"ಬೇಟೆಗೆ ಹೊರಟ ಕಣ್ಣಪ್ಪನು ಹಂದಿಯನ್ನು ಕೊಂದುದೂ ಮುಂದೆ ನಾಣನೊಂದಿಗೆ ಆತನು ಕಾಡಿನ ದೇಗುಲಕ್ಕೆ ತೆರಳಿದುದೂ ಅಷ್ಟು ಚಮತ್ಕಾರಿಕವಾಗಿ

ಪೆರಿಯಪುರಾಣದಲ್ಲಿ ಬಂದಿರುವುದಿಲ್ಲ. ಆದರೆ ಹರಿಹರನ ರಗಳೆಯಲ್ಲಿ ಈ ಭಾಗವು ಕಲಾತ್ಮಕವಾಗಿ ನಿರೂಪಿತವಾಗಿರುತ್ತದೆ." [೧೩]

ಕಣ್ಣಪ್ಪನು ಹಂದಿಯನ್ನು ಬೆನ್ನಟ್ಟಿ ಹೋದ ಎಂದು ಪೆರಿಯಪುರಾಣ ತಿಳಿಸಿದರೆ ಹರಿಹರ ಹುಲ್ಲೆಯನ್ನು ಬೆನ್ನಟ್ಟಿ ಹೋದ ಎಂದು ಚಿತ್ರಿಸಿದ್ದಾನೆ.

ರಗಳೆಯ ಪ್ರಕಾರ ಕಣ್ಣಪ್ಪ ಒಂದು ದಿನ ಹುಲ್ಲೆಯೊಂದನ್ನು ಬೆನ್ನಟ್ಟಿ ಕಾನನವನ್ನು ಪ್ರವೇಶ ಮಾಡಿದ. ಹುಲ್ಲೆ, ಓಡುತ್ತ ಓಡುತ್ತ ದೇವಸ್ಥಾನದ ಸಮೀಪಕ್ಕೆ ಹೋಗಿ ಕಣ್ಮರೆಯಾಗಿಬಿಟ್ಟಿತು. ಆಗ ಕಣ್ಣಪ್ಪ ಶಿವಾಲಯವನ್ನು ಹೊಕ್ಕು ಕಾಳಹಸ್ತೀಶ್ವರನ ದರ್ಶನ ಪಡೆದು–

"ನೋಡು ಮಹದೇವನೇ ಕೇಳು ನೀನೆನ್ನವನೆ
ನೋಡುವೆಂ ನಿನ್ನ ನನ್ನಿಗಳನಿಂದನ್ನವನೆ
ಹೋದ ಮೃಗಮಂ ಕಂಡೊಡೆನಗೆ ನೀನೊಳ್ಳಿದಂ"
ಆದಲ್ಲಿ ಭಾಗೆಯಂ ವಂಚಿಸೆಂ ಕೊಳ್ಳದಂ" (ಪುಟ ೪೫, ಸಾಲು ೮೯–೯೨)

ಎಂದು ಹರಸಿಕೊಂಡನು. ಮರೆಯಾದ ಮೃಗ ಮತ್ತೆ ಮೈದೋರಿತು. ಇವನ ಆನಂದಕ್ಕೆ ಪಾರವೇ ಇಲ್ಲ ! 'ಇಂಥ ಸತ್ಯವನ್ನು ಕಂಡೆ, ಇಂದು ಕೈ ಮೇಲೆಯೇ ಕೊಡುವ ಒಡೆಯನನ್ನು ಪಡೆದೆ ನಾನು!' ಎಂದುಕೊಂಡು,

"ಇನ್ನಗಲೆನಿನ್ನಗಲೆನಯ್ಯಯ್ಯ ನಿನ್ನುವಂ
ಮುನ್ನವಱಿಯದೆ ಕೆಟ್ಟೆನಿನಿತುವರ ನಿನ್ನುವಂ
ಎನಗುಳ್ಳವಂ ನೀನೆ ನಿನಗುಳ್ಳವಂ ನಾನೆ
ನಿನಗೆಯಿನ್ನೇಂ ಕೊಱತೆಯೆನ್ನವನೆಯಾಳನೆ'
ಬಿಡುವನಲ್ಲಂ ನಿನ್ನನಿನಿತು ದಿಟವುಳ್ಳನಂ" (ಪುಟ೪೫, ಸಾಲು ೯೯–೧೦೩)

ಎಂದು ಕೊಂಡಾಡಿದನು. ಹುಲ್ಲೆಯನ್ನು ಬೇಟೆಯಾಡಿ ಹದವಾಗಿ ಬೇಯಿಸಿ ಮಾಂಸವನ್ನು ಎರಡು ಸಮಭಾಗಗಳನ್ನಾಗಿ ಮಾಡಿ ಒಂದು ಭಾಗವನ್ನು ದೇವನಿಗೆ ಅರ್ಪಿಸಿದನು. ಅಂದಿನಿಂದ ಒಳ್ಳೊಳ್ಳೆಯ ಮೃಗಗಳನ್ನು ಬೇಟೆಯಾಡಿ

"ಕೆಂಪುಳ್ಳ ನುಂಪುಳ್ಳ ಸೊಂಪುಳ್ಳ ಖಂಡಮಂ
ಇಂಪುಳ್ಳ ತಂಪುಳ್ಳ ಕಂಪುಳ್ಳ ಖಂಡಮಂ
ಕಾಸುತಂ ತೆಗೆತೆಗೆದು ಪರಿಪಾಕಮಂ ಮಾಡಿ
ಲೇಸಪ್ಪ ಮೃದುವಪ್ಪ ತೆಳುಗಂಡಮಂ ನೋಡಿ

೧೩. ಹಿರೇಮಲ್ಲೂರ ಈಶ್ವರನ್, ಹರಿಹರನ ಕೃತಿಗಳು, ಪುಟ ೫೦೦

ನಾಲಗೆಯೊಳಾಯ್ದಾಯ್ದುಕೊಂಡವಂ"

(ಪುಟ ೪೫, ಸಾಲು ೧೨೧-೧೨೫)

ಶಿವನಿಗಾಗಿ ತೆಗೆದಿಡುವನು. ಶಿವನನ್ನು ತನ್ನದೇ ರೀತಿಯಲ್ಲಿ ಪೂಜಿಸಿ ಮಾಂಸದ ಅಡುಗೆಯನ್ನು ಅರ್ಪಿಸುವನು. ಶಿವನು ಭಕ್ತನ ಮುಗ್ಧತನವನ್ನು ಕಂಡು ಸಂತೋಷಪಡುತ್ತ ಆ ಮಾಂಸವನ್ನು ಉಂಡವನಂತೆ ತೋರಿಸಿಕೊಳ್ಳುತ್ತ ಭೂತಗಳಿಗೆ ಕೊಡುತ್ತಿದ್ದನು. ಕಣ್ಣಪ್ಪನ ಸ್ನೇಹ ದಿನದಿನಕ್ಕೂ ಬೆಳೆದು ಬಲಿತು ಅತ್ಯಂತ ಗಾಢಪ್ರೇಮವಾಗಿ ಪರಿಣಮಿಸಿತು. "ಹರಿಹರನ ರಗಳೆಯಲ್ಲಿ ವರ್ಣಿತವಾಗಿರುವ ಈ ಸನ್ನಿವೇಶವನ್ನು ಪೆರಿಯ ಪುರಾಣದ ಸನ್ನಿವೇಶದೊಂದಿಗೆ ಹೋಲಿಸಿ ನೋಡಿದರೆ ಹರಿಹರನು ಮಾಡಿಕೊಂಡಿರುವ ಬದಲಾವಣೆ ಹಾಗೂ ಸನ್ನಿವೇಶಗಳ ನಿರೂಪಣಾ ಪದ್ಧತಿಯೂ ಶೇಕ್ಕಿಳಾರನ ಕೃತಿರಚನೆಗಿಂತ ಹೆಚ್ಚು ಚಮತ್ಕಾರವಾಗಿಯೂ ಕಲಾತ್ಮಕವಾಗಿಯೂ ಬಂದಿದೆ. ಓದುಗರ ಹೃದಯವನ್ನು ಕೌತುಕದಿಂದ ತಣಿಸಿ ಅವರ ಮನದಲ್ಲಿ ನಂಬುಗೆಯನ್ನೂ, ಭಕ್ತಿಯನ್ನೂ ಕೆರಳಿಸುವುದು".[೧೪]

ಪೆರಿಯಪುರಾಣದ ಶಿವ ಕಣ್ಣಪ್ಪನಿಂದ ಎಂಜಲಾದ ಮಾಂಸದ ತುಣುಕುಗಳನ್ನು ನೇರವಾಗಿ ತಿಂದು ಸವಿಯುತ್ತಾನೆ. ಆದರೆ ಹರಿಹರನ ಶಿವ ಭೇದ ಮಾಡಿದ್ದಾನೆ. ಪೆರಿಯಪುರಾಣದ ಶಿವ ಕಣ್ಣಪ್ಪನನ್ನು ಬಲಭಾಗದಲ್ಲಿ ನಿಲ್ಲಿಸಿಕೊಳ್ಳುತ್ತಾನೆ. ಆದರೆ ಹರಿಹರನ ಶಿವ ಕಣ್ಣಪ್ಪನಿಗೆ ನಿರ್ಮಲ ದೇಹ ತಂದು ಕಣ್ಣಪ್ಪನನ್ನು ಹೊಗಿಸಿ ಕೈಲಾಸಕ್ಕೆ ಕರೆದುಕೊಂಡು ಹೋಗುತ್ತಾನೆ. ಪೆರಿಯಪುರಾಣದಲ್ಲಿ ಶಿವಬ್ರಾಹ್ಮಣರ ಸಂವಾದದ ಉಲ್ಲೇಖವಿದ್ದರೆ, ಹರಿಹರ ಅದಕ್ಕೆ ಬದಲಾಗಿ, ಶಿವಪಾರ್ವತಿಯರ ಸಂವಾದದ ಪ್ರಸ್ತಾಪವನ್ನೆತ್ತಿದ್ದಾನೆ. ಹರಿಹರ ಅರ್ಚಕರ ಹೆಸರನ್ನು ಹೇಳುವುದಿಲ್ಲ. ಪೆರಿಯಪುರಾಣದಲ್ಲಿ ಅರ್ಚಕರ ಹೆಸರು 'ಶಿವಗೋಚರಿ' ಎಂದು ಉಲ್ಲೇಖಗೊಂಡಿದೆ. ಕಣ್ಣಪ್ಪ ಮಾಡಿದ್ದ ಹೊಲಸನ್ನು ಸ್ವಚ್ಛಮಾಡಿ ಅರ್ಚಕ ಬಾಗಿಲು ಹಾಕಿಕೊಂಡು ಹೋದ ಎಂದು ಹರಿಹರ ಚಿತ್ರಿಸುತ್ತಾನೆ. ಈ ವಿಷಯ ಪೆರಿಯಪುರಾಣದಲ್ಲಿಲ್ಲ. ಶಿವನ ಕಣ್ಣಿನಲ್ಲಿ ರಕ್ತ ಸುರಿಯುತ್ತಿರುವುದನ್ನು ನೋಡಿದ ಬ್ರಾಹ್ಮಣ ಊರಿನವರನ್ನೆಲ್ಲ ಕರೆದು ತೋರುವಂತೆ ಹರಿಹರ ಚಿತ್ರಿಸಿದ್ದರೆ, ಈ ಚಿತ್ರಣ ಪೆರಿಯಪುರಾಣದಲ್ಲಿ ಇಲ್ಲ. ಶಿವನು ಕಣ್ಣಪ್ಪನಿಗೆ ಕಣ್ಣನ್ನಿತ್ತು ಅನುಗ್ರಹಿಸಿದನೆಂದು ಹೇಳಿದ ಮೇಲೆ ಹರಿಹರನ ರಗಳೆಯಲ್ಲಿ ಬರುವ ಪಂಚದುಂದುಭಿ ಹಾಗೂ,

"ಕಂಡಾ ಗಿರಿಜೆ ಎನ್ನ ಭಕ್ತ ಕಣ್ಣಪ್ಪನಂ
ಕಂಡಾ ಗಿರಿಜೆ ಎನ್ನ ನೇಹದಸುವಪ್ಪನಂ
ಇಂತಪ್ಪ ಭಕ್ತನಂ ಕಂಡು ಬಲ್ಲಾ ಗಿರಿಜೆ
ಇಂತಪ್ಪ ಭಕ್ತಿಯಿಂ ಕೇಳ್ದು ಬಲ್ಲಾ ದೇವಿ"(ಪುಟ ೫೧, ಸಾಲು ೫೪೫-೫೪೮)

ಎಂದು ಗಿರಿಜೆಗೆ ಶಿವನು ಮಾಡುವ ಭಕ್ತನ ವರ್ಣನೆ ಪೆರಿಯಪುರಾಣದಲ್ಲಿ ಇರುವುದಿಲ್ಲ.

---

೧೪. ಅಡಿಟಿಪ್ಪಣಿ ೧೩ ರಂತೆ, ಪುಟ ೫೦೦

## ಕಾರಿಕಾಲಮ್ಮೆಯ ರಗಳೆ :

ಕಾರಿಕಾಲಮ್ಮೆ ಚೋಳದೇಶದ ಕಾರೈಕ್ಕಾಲಿನಲ್ಲಿದ್ದ ವೈಶ್ಯಕುಲದ, ಧನದತ್ತನೆಂಬ ಸಿರಿವಂತನ ಮಗಳು, ಅವಳ ಹೆಸರು ಪುನೀತವತಿ ಎಂಬುದಾಗಿ ಪೆರಿಯಪುರಾಣದಲ್ಲಿ ಚಿತ್ರಣಗೊಂಡಿದ್ದರೆ, ಹರಿಹರ –

................... ಕಾರಿಕಾಲೆಂಬ ಶಿವಪುರಂ
ಅಲ್ಲಿಪ್ಪಳೊರ್ವಳು ಶಿವಜ್ಞಾನಸಂಪನ್ನೆ
ಸಲ್ಲಲಿತಸತ್ಯಭಕ್ತ್ಯಾಗಮಪ್ರತಿಪನ್ನೆ
ತನ್ನ ನಾಮಂ ಕಾರಿಕಾಲಮ್ಮೆಯೆಂಬುದದು (ಪುಟ ೯೯, ಸಾಲು ೨-೫)

ಎಂದು ಹೇಳುತ್ತಾನೆ. ಆಕೆಯ ನಿಜನಾಮ ಮತ್ತು ತಂದೆಯ ಪ್ರಸ್ತಾಪ ರಗಳೆಯಲ್ಲಿ ಕಂಡುಬರುವುದಿಲ್ಲ.

ಕಾರಿಕಾಲಮ್ಮೆಯ ಪತಿಯ ಹೆಸರು ಪೆರಿಯಪುರಾಣದಲ್ಲಿ ಪರಮದತ್ತ ಎಂದು. ಹರಿಹರನಲ್ಲಿ– "ಪತಿಯೆಂದೆನಿಪನಲ್ಲಿ ಮಾಣಿಕಶೆಟ್ಟಿ" ಎಂದಿದೆ. ಪುರಾಣದ ಪ್ರಕಾರ ಕಾರಿಕಾಲಮ್ಮೆಯ ತಂದೆ–ತಾಯಿಗಳಿಗೆ ಗಂಡು ಸಂತಾನವಿಲ್ಲ. ಅದಕ್ಕೆಂದು ಮಗಳು ಅಳಿಯನನ್ನು ತಮ್ಮ ಮನೆಯಲ್ಲಿಯೇ ಇಟ್ಟುಕೊಳ್ಳುತ್ತಾರೆ. ಹರಿಹರನಲ್ಲಿ ಕಾರಿಕಾಲಮ್ಮೆ ಪತಿಗೃಹದಲ್ಲಿಯೇ ವಾಸವಾಗಿದ್ದಳೆಂದು ಪತಿಯ ಮನೆಯವರೆಲ್ಲರೂ ಭವಿಗಳೆಂದು ಚಿತ್ರಣಗೊಂಡಿದೆ.

ಪೆರಿಯಪುರಾಣದ ಪ್ರಕಾರ ಒಂದು ದಿವಸ ಪರಮದತ್ತನು ಶಿವಭಕ್ತನೊಬ್ಬನಿಂದ ಪಡೆದ ಎರಡು ಮಾವಿನ ಹಣ್ಣುಗಳನ್ನು ಮನೆಗೆ ಕಳುಹಿಸಿಕೊಡುತ್ತಾನೆ. ಅದೇ ಸಮಯದಲ್ಲಿ ಹಸಿದು ಬಾಗಿಲಿಗೆ ಬಂದು ನಿಂತ ಭಿಕ್ಷುಕನೊಬ್ಬನನ್ನು ಆದರದಿಂದ ಪುನೀತವತಿ ಒಳಗೆ ಬರಮಾಡಿಕೊಂಡು ಅನ್ನ ನೀಡುತ್ತಾಳೆ. ನಂಜಿಕೊಳ್ಳಲು ಕಾಯಿಪಲ್ಯ ಇನ್ನೂ ಸಿದ್ಧವಾಗದ್ದರಿಂದ ಒಂದು ಮಾವಿನ ಹಣ್ಣನ್ನು ಹೆಂಚಿಕೊಡುತ್ತಾಳೆ. ಊಟ ಮಾಡಿ ಸಂತೋಷಪಟ್ಟ ಭಿಕ್ಷುಕನು ಪುನೀತವತಿಯ ಭಕ್ತಿ ಸಾಮರ್ಥ್ಯವನ್ನು ಹಾಡಿ ಹರಸುತ್ತ ಹೊರಟುಹೋಗುತ್ತಾನೆ. ರಗಳೆಯಲ್ಲಿ ಈ ಪ್ರಸಂಗ ಪೆರಿಯಪುರಾಣಕ್ಕಿಂತ ಭಿನ್ನವಾಗಿ ದೀರ್ಘವಾಗಿ ಈ ಕೆಳಕಂಡಂತೆ ವರ್ಣಿತವಾಗಿದೆ.

ಒಂದು ದಿನಮಿರುತಮಿರಲಲ್ಲಿ ಮಾಣಿಕಶೆಟ್ಟಿ
ಗೆಂದು ತಂದರು ಕಾಣ್ಕೆಗಳುಮಂ ಮನಂ ಮುಟ್ಟಿ
ಈಳದಿದಂ ಕೆಲವಕಾಲದ ಫಲಂಗಳಂ
ಬಾಳಚೂತದ ನೂತ್ನಕಲ್ಪಫಲತತಿಗಳಂ

ಅಮ್ಮೆಗಭವಾಚಲದ ಪಯಣಮಂ ತಪ್ಪಂತೆ
ಅಮ್ಮೆಗೆ ದಿಟಂ ದೃಷ್ಟಫಳಮುಮಂ ತಪ್ಪಂತೆ
ತಂದು ಕಾಣಿಕೆಯೀಯೆ ಕಂಡು ನೆರೆ ಕೊಂಡಾಡಿ
ತಂದವರ್ಗುಡಕೊಟ್ಟು ಕಳುಹಿ ಹಣ್ಣಂ ನೋಡಿ
ಹಾರಯ್ಸೆ ಪೊಸಫಲವಿವೆಂದು ಹರುಷಂಬಟ್ಟು
ಕಾರಿಕಾಲಮ್ಮೆಯರ ಕಯ್ಯಲೊಲವಿಂ ಕೊಟ್ಟು
ಅತಿಸುರಕ್ಷಿತದಿಂದೆ ಬೈತಿಡೆನುತಂ ಪೇಳ್ದು
ಪತಿ ಪೋದನ್ ..................... (ಪುಟ ೯೯, ಸಾಲು ೫೧-೬೨)

ಮಾವಿನ ಹಣ್ಣುಗಳನ್ನು ನೋಡಿದ ಕಾರಿಕಾಲಮ್ಮೆಯು

ಆಹಾ ಶಿವಂಗೆ ಶಿವಭಕ್ತರ್ಗೆ ಯೋಗ್ಯವಿದು
ಆಹಾ ಮಹಾದೇವ ಮರ್ತ್ಯಂಗ್ಯಯೋಗ್ಯವಿವು
(ಪುಟ ೧೦೦, ಸಾಲು ೬೫-೬೬)

ಎಂದು ತಾನು ನಿತ್ಯ ನೇಮಗಳನ್ನು ಮಾಡಿ ಬೋನಕ್ಕೆ ಮೇಲೋಗರವನ್ನು ಕೂಡಿ ಎಡೆಮಾಡುವ ಸಮಯಕ್ಕೆ ಸರಿಯಾಗಿ, 'ಸರ್ವೇಶ್ವರಂ ಸಾಧುಭಕ್ತನ ವೇಷಮಂ ತಳೆದು' ಪ್ರತ್ಯಕ್ಷನಾಗುತ್ತಾನೆ.

ಏಕಮುಖವೆಳಲ್ವ ಜಡೆ ಪುಲಿದೊವಲ ವಿಸ್ತರಂ
ಲೋಕದೊಳು ಸುಳಿವ ತಪಸಿಗಳಂತಿರಲ್ಕರಂ
(ಪುಟ ೧೦೦, ಸಾಲು ೭೩-೭೪))

ಕಂಡು ಅಮ್ಮೆಯು 'ಭವಿಗಳಿಹ ಮನೆಗೇಕೆ ಬಂದಯ್ಯ' ಎನಲು, ಸಾಧುವೇಷದ ಶಿವ ಏನೂ ಅರಿಯದವನಂತೆ ನಟಿಸುತ್ತ-

ಭಕ್ತರೆಂದರಿಯೆವಾರೆಂದರಿಯೆವೆಲೆಯಮ್ಮ
ಭಕ್ತಗಷ್ಟೋಗರವನಿಕ್ಕೆ ಪೋದಪೆವಮ್ಮ(ಪುಟ ೧೦೦, ಸಾಲು ೮೧-೮೨)

ಎಂದು ಮಾರ್ನುಡಿದ. ಅದಕ್ಕೆ ಕಾರಿಕಾಲಮ್ಮೆಯು-

ಆರುವುಂ ಕಾಣ್ಬುದಕೆ ಮುನ್ನವಾರೋಗಿಪುದು
ಆರುವರಿಯದ ತೆರುದೆ ತುರಿತದಿಂ ಕರುಣಿಪುದು
ದೇವ ಕಂಡೊಡೆ ಭಕ್ತೆ ಎಂದರುಸದಂತಕ್ಕು
ದೇವ ಬಳಿಕಾಂ ಬದುಕೆನರಿದಡಿರಿದಂತಕ್ಕು
(ಪುಟ ೧೦, ಸಾಲು ೮೭-೯೦)

ಎನ್ನುತ್ತ ಮಾವಿನ ಫಲವನ್ನು ಎಡೆಮಾಡಿದಳು. 'ಭಕ್ತ'ನು ಫಲವನ್ನು ಸವಿಯುತ್ತಿರುವಾಗ ಮಾಣಿಕಶೆಟ್ಟಿ ಅನಿರೀಕ್ಷಿತವಾಗಿ ಆಗಮಿಸಿದನು. ಶಿವಭಕ್ತನು

ಕಾಣಿಸಿಕೊಂಡೂ ಕಾಣಿಸಿಕೊಳ್ಳದವನಂತೆ ಮೆಲ್ಲಮೆಲ್ಲನೆ ನುಸುಳಿಹೋದ. ಆತನನ್ನು ನೋಡಿದ ಶೆಟ್ಟಿಯ ಮನದಲ್ಲಿ ಸಂದೇಹ ಮೂಡಿತು.

ಪೆರಿಯಪುರಾಣದ ಪ್ರಕಾರ ಮಧ್ಯಾಹ್ನ ಊಟಕ್ಕೆಂದು ಪರಮದತ್ತನು ಅಂಗಡಿಯಿಂದ ಮನೆಗೆ ಬರುತ್ತಾನೆ. ಸ್ನಾನ ಪೂಜಾದಿಗಳನ್ನು ತೀರಿಸಿಕೊಂಡು ಪರಮದತ್ತನು ಊಟಕ್ಕೆ ಕೂಡುತ್ತಾನೆ. ಅನ್ನದ ಜೊತೆಗೆ ನಂಜಿಕೊಳ್ಳಲು ಮಾವಿನ ಹಣ್ಣನ್ನೂ ಕೊಡುತ್ತಾಳೆ. ಹಣ್ಣು ರುಚಿ ಇದ್ದುದರಿಂದ ಇನ್ನೊಂದನ್ನು ಅಪೇಕ್ಷಿಸುತ್ತಾನೆ. ಪುನೀತವತಿ ಗಾಬರಿಪಡುತ್ತಾಳೆ. 'ಶಿವನೇ ಕಾಪಾಡು' ಎಂದು ಇಟ್ಟ ಸ್ಥಳದಲ್ಲಿ ಕೈಹಾಕಿದಾಗ ಹಣ್ಣೊಂದು ದೊರೆತು ಹಿಡಿಸಲಾರದಷ್ಟು ಹಿಗ್ಗಾಗಿ ಪತಿಗೆ ಹಣ್ಣನ್ನು ಕೊಡುತ್ತಾಳೆ. ಅದನ್ನೂ ತಿಂದು ಪರಮದತ್ತನಿಗೆ ಸಂತೋಷವಾಗಿ ಮೊದಲ ಹಣ್ಣಿಗಿಂತಲೂ ಬಹಳೇ ರುಚಿಯನ್ನ ಕೊಟ್ಟಿದ್ದರಿಂದ ತಾನು ತಂದ ಹಣ್ಣೆ ಎಂದು ಸಂಶಯದಿಂದ ಪತ್ನಿಯನ್ನು ಕೇಳುತ್ತಾನೆ. ಆಕೆ ಸುಳ್ಳಾಡಲಾರದೆ ಉತ್ತರ ಕೊಡದೆ ಮೌನ ತಾಳುತ್ತಾಳೆ. ಹೇಳಬೇಕೋ...... ಹೇಳಬಾರದೊ...... ಹೇಳಿದರೆ ಶಿವಭಕ್ತಿ ಬಯಲಿಗೆ ಬೀಳುತ್ತದೆ. ಕೊನೆಗೆ ಪತಿಗೆ ನಿಜಸಂಗತಿಯನ್ನು ತಿಳಿಸುತ್ತಾಳೆ. ಪರಮದತ್ತ ನಂಬುವುದಿಲ್ಲ. "..........ದೇವರು ನೀನು ಹೇಳಿದಂತೆ ಕೇಳುವವನಿದ್ದರೆ ನೋಡೋಣ. ನನಗೆ ಇನ್ನೊಂದು ಹಣ್ಣು ಬೇಡಿ ತಾ" ಎನ್ನಲು ಪತಿಯ ಸಂಶಯವನ್ನು ದೂರಮಾಡು ಎಂದು ದೇವರನ್ನು ಅಂಗಲಾಚಿ ಬೇಡುತ್ತಾಳೆ. ಮತ್ತೊಂದು ಹಣ್ಣು ಅವಳ ಕೈ ಸೇರುವಂತೆ ಅನುಗ್ರಹಿಸುತ್ತಾನೆ. ಅದನ್ನು ತಂದು ಗಂಡನಿಗೆ ಅರ್ಪಿಸುತ್ತಿರುವಾಗ ಕೈಮುಟ್ಟಿ ಹಿಡಿದುಕೊಳ್ಳಲು ಹೋದಾಗ ಪರಮದತ್ತನ ಕೈಸೋಂಕುವಷ್ಟರಲ್ಲಿಯೇ ಆ ಹಣ್ಣು ಮಾಯವಾಗುತ್ತದೆ. ತನ್ನ ಪತ್ನಿಯ ದೈವೀಭಕ್ತಿಯನ್ನು ಮನಗಂಡ ಪರಮದತ್ತನು, ತಾನೇ ನಿಸ್ಸಂಗಿಯಾಗಿ ಆಕೆ ಪರದೈವವೆಂದು ನಂಬಿ, ಆಕೆ ಪತ್ನಿಯಲ್ಲವೆಂದೂ, ತನಗೆ ಪೂಜ್ಯ ವ್ಯಕ್ತಿಯೆಂದೂ ಸಾರುತ್ತಾನೆ.

ಹರಿಹರನಲ್ಲಿ ಈ ಪ್ರಸಂಗ ಬದಲಾವಣೆಗೊಂಡು ಚಿತ್ರಣಗೊಂಡಿದೆ. ರಗಳೆಯ ಪ್ರಕಾರ ಶೆಟ್ಟಿ ಊಟಮಾಡುತ್ತಲಿದ್ದಾಗ ಆತನಿಗೆ ಆ ಅಪರೂಪದ ಹಣ್ಣುಗಳ ನೆನಪಾಗಿ ಕೇಳಿದಾಗ ಕಾರಿಕಾಲಮ್ಮೆ ಉಳಿದಿದ್ದ ಒಂದು ಹಣ್ಣನ್ನು ತಂದು ಬಡಿಸಿದಳು. 'ಇನ್ನೊಂದು ಹಣ್ಣೆಲ್ಲಿ? ಎಂದು ಕೇಳಿದಾಗ ದಿಗ್ಭ್ರಾಂತಳಾದ ಆಕೆ ಆದುದಾಗಲಿ ಎಂಬ ದೃಢನಿರ್ಧಾರದಿಂದ ಕೈಯೊಂದಿಗೆ ಪ್ರಾಣವನ್ನು ಬೆರೆಸಿ ಹಣ್ಣನ್ನಿಟ್ಟಿದ್ದ ತಾವಿನಲ್ಲಿ ಕೈ ಇರಿಸಲು, ತಾನು ಶಿವಭಕ್ತನಿಗೆ ಕೊಟ್ಟ ಹಣ್ಣಿನ ಸ್ಥಾನದಲ್ಲಿ ಮತ್ತೊಂದು ಹಣ್ಣಿರುವುದನ್ನು ಅರಿತು, ಹರುಷಿತಳಾಗಿ ತಂದು ಬಡಿಸಿದಳು. ಆ ದಿವ್ಯ ಫಲವನ್ನು ಮುಟ್ಟಿದುದಕ್ಕೆ ಸೆಟ್ಟಿಯ ಮೈ ಪುಳಕಗೊಂಡಿತು. ನೋಡುವ ಕಣ್ಣುಗಳಿಗೂ ಸವಿಗಳನ್ನು ಸಲ್ಲಿಸುತ್ತಿದ್ದಿತು ಆ ದಿವ್ಯ ಫಲ. 'ಕಾರಣಿಕೆ, ಈ ಫಲ ಎಲ್ಲಿಯದು? ಎಂದು ಕೇಳಿದ ಅಮ್ಮೆ ನಡೆದ ಸಂಗತಿಯನ್ನು ಹೇಳಿದಳು. ಹೆಂಡತಿಯ ಈ

ಮಾತುಗಳನ್ನು ಕೇಳಿದ ಸೆಟ್ಟಿಯು ಭಯಗೊಂಡು, ಆ ಗಳಿಗೆಯಲ್ಲಿಯೆ, ಕಾರಿಕಾಲಮ್ಮೆ ತನ್ನ ಸತಿಯೆಂಬ ಭಾವನೆಯನ್ನು ಉಡುಗಿ-

ಮುನ್ನವೇ ಸಂದೇಹಿಸುತ್ತಿದ್ದೆನೆಲೆ ತಾಯೆ
ಇನ್ನೆನ್ನ ಸತಿಯೆಂದು ನುಡಿಯೆಂ ಮಹಾಮಾಯೆ
..............................................................
ಇಂತಪ್ಪ ಸತಿಯಿರುಂಟೇ ಶಿವಂ ಬಪ್ಪನೇ
..............................................................
ಕರುಣಿಪುದು ಕಾವುದೆನ್ನಂ ಕಾರಿಕಾಲಮ್ಮೆ
..............................................................
ಇನ್ನೆನಗೆ ನೀವೇ ಗುರುಸ್ಥಾನವೆಲೆ ತಾಯೆ
..............................................................
ಕರುಣಿಸುವುದುಪದೇಶವಂ ಮಾಳ್ಪುದಿನ್ನೆನಗೆ

(ಪುಟ ೧೦೦ ಸಾಲು ೧೩೩-೧೪೫)

ಎಂದು ಬೇಡಿಕೊಂಡನು. ತನ್ನ ಗುಪ್ತಭಕ್ತಿ ಪ್ರಕಟಗೊಂಡಿತಲ್ಲಾ ಎಂದು ಕಾರಿಕಾಲಮ್ಮೆ ಕಂದಿ ಕರಗಿ ಇನ್ನು ಅಲ್ಲಿರುವುದು ತಕ್ಕುದಲ್ಲವೆಂದು, ಪತಿಗೆ ಉಪದೇಶವಿತ್ತು ಹೊರಟುಬಿಟ್ಟಳು.

ಪೆರಿಯಪುರಾಣದ ಪ್ರಕಾರ ಪರದತ್ತ ವ್ಯಾಪಾರದ ನೆವವನೊಡ್ಡಿ ದೂರದೇಶದ ಪ್ರವಾಸಕ್ಕೆಂದು ಹೋಗಿ, ಪಾಂಡ್ಯದೇಶದ ನಗರವೊಂದರಲ್ಲಿ ಇದ್ದುಕೊಂಡು ವ್ಯಾಪಾರ ಮಾಡಿ ಸಾಕಷ್ಟು ಹಣಗಳಿಸಿ, ಇನ್ನೊಂದು ಮದುವೆಯಾಗಿ, ಒಂದು ಹೆಣ್ಣು ಮಗುವಿನ ತಂದೆಯಾಗಿ ತನ್ನ ದೇವಿಯ ಸ್ಮರಣೆಗಾಗಿ ಆ ಹೆಣ್ಣುಮಗುವಿಗೆ, ಪುನೀತವತಿಯೆಂದೇ ನಾಮಕರಣ ಮಾಡುತ್ತಾನೆ. ಇತ್ತ ಕಾರಿಕಾಲಪಟ್ಟಣದಲ್ಲಿ ಪುನೀತವನಿ ಪತಿಯ ಬರುವಿಕೆಗಾಗಿ ಕಾಯ್ದು ಕಾಯ್ದು ದುಃಖಿತಳಾಗುತ್ತಾಳೆ. ಪುನೀತವತಿಯ ಸಂಬಂಧಿಕರಿಗೆ ಆತ ಇನ್ನೊಂದು ಲಗ್ನವಾಗಿರುವುದು ತಿಳಿದು ಆಕೆಯನ್ನು ಪಾಂಡ್ಯದೇಶಕ್ಕೆ ಕರೆದುಕೊಂಡು ಹೋಗುತ್ತಾರೆ. ವಿಷಯ ತಿಳಿದ ಪರಮದತ್ತ ಕ್ಷಮೆಕೇಳುವ ರೀತಿಯಲ್ಲಿ ಸ್ವಾಗತಕ್ಕಾಗಿ ಬರುತ್ತಾನೆ. ಆಕೆಯ ಕಾಲಿಗೆ ಬಿದ್ದು ನೇಮಟರಿಷ್ಟರಿಗೆ ಆಕೆಯ ಮಹಿಮೆಯನ್ನು ತಿಳಿಸುತ್ತಾನೆ.

ರಗಳೆಯಲ್ಲಿ ಆತ ಇನ್ನೊಂದು ಮದುವೆಯಾದದ್ದು, ಮಗುವೊಂದನ್ನು ಪಡೆದದ್ದು, ಗಂಡನನ್ನು ಹುಡುಕಿಕೊಂಡು ಕಾರಿಕಾಲಮ್ಮೆ ಪಾಂಡ್ಯದೇಶಕ್ಕೆ ಹೋದ ಪ್ರಸಂಗವಿಲ್ಲ. ಪತಿಯನ್ನು ಬಿಟ್ಟು ಹೊರಟಂತೆ ಹರಿಹರ ಚಿತ್ರಿಸಿದರೆ ಶೇಕ್ಕಿಳಾರ್ ಪತ್ನಿಯನ್ನು ಬಿಟ್ಟು ಪತಿಯೇ ಬೇರೆ ಕಡೆ ತೆರಳಿದಂತೆ ಚಿತ್ರಿಸಿದ್ದಾನೆ.

ಪತಿಯ ಮನದ ಇಂಗಿತವನ್ನರಿತ ಪುನೀತವತಿ, ಪತಿಯಾದವನೇ ಕೈಹಿಡಿದ ಸತಿಯನ್ನು ಒಲ್ಲೆನೆಂದಾಗ ಆತನಿಗಾಗಿ ಮೀಸಲಿದ್ದ ತನ್ನ ದೇಹ ಸೌಂದರ್ಯ

ನಶಿಸಿಹೋಗಲಿ ಎನ್ನುತ್ತಾಳೆ. ಪ್ರೇತ ಶರೀರವನ್ನು ಬಯಸಿ ವಿರಾಗಿಯಾಗುತ್ತಾಳೆ. ಲೌಕಿಕ ಜಗತ್ತಿನ ಹಂಗು ತೊರೆದು ಆಧ್ಯಾತ್ಮಿಕ ಜಗತ್ತಿನ ಸುಖಬಯಸಲು ಹಾತೊರೆಯುವಳು. ಯಾರೂ ಇಲ್ಲದ ಒಂಟಿಯಾಗಿ ಸಾಗುತ್ತಿರುವ ಈ ಸುಂದರ ಹೆಣ್ಣನ್ನು ಕಂಡ ಕಾಮುಕಜನ ವಿಷಯ ಲಂಪಟಕ್ಕಾಗಿ ಬಾಯ್ದೆರೆದು ಬೆನ್ನು ಹತ್ತಿದಾಗ ಅಸ್ತಿಪಂಜರದ ಅವಳ ರೂಪು ಕಂಡ ಜನ ಹೌಹಾರಿ, ಇದು ಪಿಶಾಚಿಯೆಂದು ಓಡೋಡಿ ಹೋಗುತ್ತಾರೆ. ಎಂದು ಪೆರಿಯ ಪುರಾಣದಲ್ಲಿ ಚಿತ್ರಣಗೊಂಡಿದೆ.

ರಗಳೆಯಲ್ಲಿ ಪತಿಯನ್ನು ತ್ಯಜಿಸಿ ಕೈಲಾಸದತ್ತ ಸಾಗುತ್ತಿರುವಾಗ ಪಾಪಿಗಳು ಪಿಪಾಸೆಯಿಂದ ಆಕೆಯನ್ನು ಹಿಂಬಾಲಿಸುತ್ತಾರೆ ಅವರನ್ನು ಕಂಡು ಮರುಗಿದ ಕಾರಿಕಾಲಮ್ಮೆ ಶಿವನನ್ನು ಕೇಳಿಕೊಂಡು ಸ್ಥೂಲದೇಹವನ್ನು ತ್ಯಜಿಸಿ ಸೂಕ್ಷ್ಮದೇಹವನ್ನು ಧರಿಸಿದಳು. 'ಅಯ್ಯೋ ಪಿಶಾಚ! ಮರುಳು!' ಎಂದು ಚೀರಿಕೊಳ್ಳುತ್ತ 'ಲಘುಜನ' ಚದುರಿ ಓಡಿತು. ಶಿವನ ಘನತಾಂಡವಾಡಂಬರದ ದೃಶ್ಯ ರಗಳೆ, ಪೆರಿಯಪುರಾಣದ ಎರಡೂ ಕಡೆಯೂ ಬಂದಿದೆ.

ಕೈಲಾಸ ಮಾರ್ಗದಲ್ಲಿ ಶರಣರ ಹೆಜ್ಜೆಗಳನ್ನು ಗುರುತಿಸಿದ ಕಾರಿಕಾಲಮ್ಮೆ-

ಆಹಾ ಶರಣರೆಲ್ಲ ನಡೆದ ಹಾದಿಯ ಹೆಜ್ಜೆ
ಆಹ ಎನ್ನೊಡೆಯರೊಲವಿಂ ನಡೆದ ಹೊಸ ಹೆಜ್ಜೆ
ಇಂತಿವೆನ್ನಯ ಶಿರದ ಮೇಲಿರಲ್ವೇಳ್ಕೆಂದು
ಚಿಂತಿಸಿದಳೊಂದು ತೆಱನಂ ಚಿತ್ತದೊಳಗಂದು
ಅವರೆಲ್ಲಂ ನಡೆದಂತೆ ಆಂ ನಡೆಯಬಲ್ಲೆನೇ
ಅವರಂತೆ ಸಾಮರ್ಥ್ಯಮುಳ್ಳೊಡಾನೊಲ್ಲೆನೇ
ಎನ್ನ ಕಯ್ ಕಾಲಾಗಿ ನಡೆವೆ ನಾನಿಂತಿಲ್ಲ
ಎನ್ನ ತಲೆಯಡಿಯಾಗಿ ........... (ಪುಟ ೧೦೩, ಸಾಲು ೩೦೩-೩೧೦)

ನಡೆಯತೊಡಗಿದಳು. 'ಎಲೆ ಶರಣರಡಿಗಳಿರ ಶಿವನಲ್ಲಿಗೊಯ್ಯಿರೇ; ಎಲೆ ಹೆಜ್ಜೆಗಳಿರ ಕೈಲಾಸಕ್ಕೆ ಕಳುಹಿರೇ'-ಎಂದು ಪ್ರಾರ್ಥಿಸುತ್ತ 'ಒಂದೊಂದು ಗಳಿಗೆಗೆ ಒಂದಡಿಯನ್ನಿಟ್ಟು' ನಡೆಯತೊಡಗಿದಳು ಎಂದು ಹರಿಹರ ಚಿತ್ರಿಸಿದ್ದಾನೆ. ಪೆರಿಯಪುರಾಣದಲ್ಲೂ ಇದೇ ತೆರನಾದ ಪ್ರಸಂಗ ಬಂದಿದೆ. ಈ ಪ್ರಸಂಗದಲ್ಲಿ ಎರಡೂ ಕಾವ್ಯಕ್ಕೂ ಸಾಮ್ಯತೆ ಇದೆ.

ಮೆಯ್ಯೆಲ್ಲ ಎಲುವಾಗಿ ತಲೆಯೂರಿ ನಡೆದು ಬರುತ್ತಿದ್ದ ಅಮ್ಮೆಯನ್ನು ನೋಡಿ ಪಾರ್ವತಿದೇವಿಯೂ ನಡನಡನೆ ನಡುಗಿ-

ದೇವಾ ಇದೊಂದು ಮರುಳೀ ಬಂದುದೆಲೆ ದೇವ
ದೇವ ನಾನಂಜಿದಪೆನ್ .......... (ಪುಟ ೧೦೩ ಸಾಲು ೩೩೯-೩೪೦)

ಎನಲು,

ಅಲ್ಲಲ್ಲ ಎಲೆ ಗಿರಿಜೆ ಕಾರಿಕಾಲಮ್ಮೆಯಿರು
ಅಲ್ಲಲ್ಲ ಗೌರಿ ನಿಮ್ಮತ್ತೆ ನಮ್ಮವ್ವೆಯಿರು
ಎನ್ನಯ ಜನನಿಯೆನಗೆ ಹಣ್ಣಿತ್ತ ಹಿತವೆಯಿರು
ಎನ್ನವ್ವೆ ನಿಮ್ಮತ್ತೆ ಕಾರಿಕಾಲಮ್ಮೆಯಿರು(ಪುಟ ೧೦೩, ಸಾಲು ೩೪೩-೩೪೬)

ಎಂದು ಹೇಳಿ ಆಕೆಯನ್ನು ಗಣಪದವಿಯಲ್ಲಿರಿಸಿದನು. ಎಂದು ರಗಳೆ ಚಿತ್ರಿಸುತ್ತದೆ. ಪೆರಿಯ ಪುರಾಣದಲ್ಲೂ ಇದೇ ರೀತಿ ಚಿತ್ರಣಗೊಂಡಿದೆ.

ರುದ್ರಪಶುಪತಿಯ ರಗಳೆ :

ರುದ್ರಪಶುಪತಿಯ ಬಗೆಗೆ ಪೆರಿಯಪುರಾಣ ಹೆಚ್ಚು ಹೇಳುವುದೇ ಇಲ್ಲ. ಇಡೀ ಕಥೆ ನಿರೂಪಣೆಗೊಂಡಿರುವುದು ಕೇವಲ ಹತ್ತುಪದ್ಯಗಳಲ್ಲಿ ಮಾತ್ರ. ಹರಿಹರ ವಿಸ್ತಾರವಾಗಿ ಈ ಕಥೆಯನ್ನು ನಿರೂಪಿಸಿದ್ದಾನೆ. 'ತಿರುತ್ತಲೆಯೂರು' ರುದ್ರಪಶುಪತಿಯ ಊರು ಎಂದು ಪೆರಿಯಪುರಾಣ ಹೇಳಿ ಮುಂದೆ ಪ್ರಕೃತಿ ವರ್ಣನೆಗೆ ತೊಡಗುತ್ತದೆ. ರಗಳೆಯಲ್ಲಿ ಪ್ರಕೃತಿ ವರ್ಣನೆ ಬರುವುದಿಲ್ಲ. ಹರಿಹರನು 'ತಿರಿತಲೆವೂರು' ರುದ್ರಪಶುಪತಿಯ ಊರು ಎನ್ನುತ್ತಾನೆ.

ರುದ್ರಪಶುಪತಿಯ ತಂದೆ-ತಾಯಿಗಳ ಪ್ರಸ್ತಾಪ ಪೆರಿಯಪುರಾಣದಲ್ಲಿಲ್ಲ. ರಗಳೆಯಲ್ಲಿ-

...........ರುದ್ರ ಪ್ರಭುವೆನಿಪ್ಪ ವಿಪ್ರಂನೋಡ
ಸಲ್ಲೀಲೆವೆತ್ತ ಶಂಕರನ ಭಕ್ತಂ ನೋಡೆ
ಆತಂಗೆ ರಂಜಿಪಳ ಶುಚಿಯೆಂಬ ಸತಿ ನೋಡ
(ಪುಟ ೬೮ ಸಾಲು ೫-೭)

ಎಂದು ತಂದೆ – ತಾಯಿಯ ಹೆಸರಿನ ಪ್ರಸ್ತಾಪವಿದೆ. ಶಿವಲಿಂಗದ ಮೇಲೆ ಇರುವೆಯೊಂದು ಹರಿದಾಡುವ ಪ್ರಸಂಗವನ್ನು ಹರಿಹರ ತಂದಿದ್ದಾನೆ. ರುದ್ರ ಪಶುಪತಿಯು ಒಂದು ದಿನ –

ಸಂತಸದೆ ನಿತ್ಯನೇಮಕ್ಕೆ ಮನವಂ ತಂದು
ನಡೆದು ತಿರುತಲೆವೂರ ದೇವರಲ್ಲಿಗೆ ಬಂದು
ಮೃಡನೆ ಎನ್ನಭಿಮಾನವೇ ಶಿವನೆ ಶರಣೆಂದು
ಮೆಲ್ಲಮೆಲ್ಲನೆ ಪೂಜೆಯಿಂ ಪರಿಹರಿಸುತ್ತಿರಲು
ಅಲ್ಲಿ ಲಿಂಗದೊಳೊಂದಿಱುಂಪೆ ಪರಿವುತ್ತಿರಲು
ಕಂಡು ಹವ್ವನೆ ಹಾಱಿ ಮಱುಗಿ ಮಿಗೆ ಬಗೆಗೆಟ್ಟು

ಕಂಡೈ ಇರುಂಪೆಯೂರಿತೆಯೆಂದು ಬಾಯ್ಬಿಟ್ಟು
ಏನವ್ವ ಪಾರ್ವತಿಯೆ ಸುಮ್ಮನಿರ್ದಪಿರವ್ವ
ಏನಂತಿಋಂಪೆ ಊಱಲು ನೋಡುತಿರ್ದವ್ವ
ಗಂದೆ ನಸೆದುದೊ ದೇಹ ಚುಳ್ಳನುರಿದುದೆ ತಂದೆ
ಬೆಂದೆ ನಾಂಬೆಂದೆ ನಾನಿಲ್ಲೀಗಳೆಲೆ ತಂದೆ

(ಪುಟ ೬೬, ಸಾಲು ೩೮-೪೮)

ಎಂದು ಪರಿತಪಿಸುತ್ತಾನೆ. ಪೆರಿಯಪುರಾಣದಲ್ಲಿ ಈ ಪ್ರಸಂಗ ಬರುವುದಿಲ್ಲ.

ಒಂದು ದಿನ ಶಿವಗೋಷ್ಠಿಯೊಂದರಲ್ಲಿ ರುದ್ರಪಶುಪತಿ, ಶಿವಪುರಾಣವನ್ನು ಕೇಳಿ ಸಂತಸಪಡುತ್ತಿದ್ದಾಗ –

ಕೇಳ್ವಭಕ್ತ ಕಿವಿಗೆ ಹೊಸತಾಗೆ ಚಂದದಿಂ
ಇರಲಾ ವಿಷವನುಂಡನೀಶನೆಂದೆನಲೊಡಂ
ಹರನ ಕೊರಲೊಳಗಿನ್ನುವಿಷವಿರ್ಪುದೆನಲ್ರೆಡಂ

(ಪುಟ೨೦, ಸಾಲು ೧೦೬-೧೦೮)

ಎಲೆಲೆ ಕೆಟ್ಟೆಂ ಕೆಟ್ಟೆನೇನಾಯ್ತುದೇನಾಯ್ತು
ಎಲೆಲೆ ಎನುತೆನುತಲ್ಲಿ ಜೀವವಾಗಳೆ ಹೊಯ್ತು.
ಏನೆಂಬೆನಾ ರುದ್ರಪಶುಪತಿಗಳೆಚ್ಚತ್ತು
ನಾನಾ ನಿರೋಧಮಂ ಕಡುಗೋಪಮಂ ಮೊತ್ತು
..................................................................
ಎಲೆಪಾಪಿಗಳಿರ ಪರಿಹಾರವಂ ಮಾಡಿರೇ
..................................................................
ಅಯ್ಯೋ ಶಿವಂ ಸೈರಿಸಲ್ಕೆ ಆರ್ಪವನಲ್ಲ
..................................................................
ಅಲ್ಲದಂಗೆ ವಿಷಧರತ್ವಂ ಬಂದುದೆಂತಯ್ಯ (ಪುಟ ೨೦, ಸಾಲು ೧೧೮-೧೨೪)

ಎಂದು ದುಃಖಿಸುತ್ತಾ,

ಬಂದನುರವಣಿಸುತಂ ಭಕ್ತಿವಾರ್ಧಿಯ ತಡಿಗೆ
ಬಂದನೊಲವಿಂ ವಿಷಂ ಪರಿಹಾರವಪ್ಪೆಡೆಗೆ
..................................................................
ಪೊಕ್ಕನಂಬುಧಿಯೊಳಗೆ ಕಂಠ ಪ್ರಮಾಣಮಂ
..................................................................
ತೊಡಗಿದಂ ಜಪಿಯಿಸಲು ಪಂಚಾಕ್ಷರಿಯಿನಲ್ಲಿ

(ಪುಟ ೨೦-ಸಾಲು ೧೪೫-೧೬೧)

ಶಿವನ ಕಂಠದಲ್ಲಿರುವ ವಿಷವನ್ನು ತೊಡೆಯಲು ಸಮುದ್ರ ಮಧ್ಯಕ್ಕೆ ಹೋಗಿ ಪಂಚಾಕ್ಷರಿ ಜಪದಲ್ಲಿ ತೊಡಗುವ ಮೇಲಿನ ಈ ಪ್ರಸಂಗ ಪೆರಿಯಪುರಾಣದಲ್ಲಿಲ್ಲ. ಇವೆಲ್ಲ ಹರಿಹರನ ಸ್ವಂತ ಕಲ್ಪನೆಗಳು.

## ನಂಬಿಯಣ್ಣನ ರಗಳೆ :

ಶೇಕ್ಕಿಳಾರನ ಪೆರಿಯಪುರಾಣದ ಆದಿ-ಅಂತ್ಯ ಭಾಗಗಳಲ್ಲಿ ಹಾಗೂ ಅನೇಕ ನಾಯನ್ಮಾರರ ಕಥೆಗಳಲ್ಲಿ ಸುಂದರಮೂರ್ತಿಯ ಕಥೆ ಪ್ರಸ್ತಾಪವಾಗಿದೆ. ಕಥೆ ಇಲ್ಲಿ ಏಕಮುಖವಾಗಿ ಸಾಗಿಲ್ಲ. ಚದುರಿ ಹೋಗಿದೆ. ಸುಂದಮೂರ್ತಿಯ ಜೀವನದ ಕಥೆಯನ್ನು ಕನ್ನಡದಲ್ಲಿ ಮೊದಲಿಗೆ ಹೇಳಿದ ಹರಿಹರ, ತನ್ನ ನಂಬಿಯಣ್ಣನ ರಗಳೆಯಲ್ಲಿ ಕಥಾನಾಯಕನಾದ ನಂಬಿಯ ಬದುಕಿನ ವೃತ್ತಾಂತವನ್ನು, ಸುತ್ತುಬಳಸಿಲ್ಲದೆ ನೇರವಾಗಿ ಹೇಳಿದ್ದಾನೆ. "ಚದುರಿ ಹೋಗಿದ್ದ ಸುಂದರಮೂರ್ತಿಯ ಜೀವನ ವೃತ್ತಾಂತವನ್ನು ಹಲವಾರು ಮೂಲಗಳಿಂದ ಕಲೆಹಾಕಿ ಕೃತಿ ರಚನೆ ಮಾಡಿದ ಪ್ರಥಮ ಶ್ರೇಯಸ್ಸು ಹರಿಹರನದು, ಮೇಲಾಗಿ ಕನ್ನಡದ್ದು".[೧೫]

"ನಂಬಿಯಣ್ಣ (ಅ) ಸುಂದರಮೂರ್ತಿ ನಾಯನಾರರ ಬಗೆಗೆ ಕೃತಿ ರಚನೆ ಮಾಡುವಾಗ ಹರಿಹರನಿಗೆ 'ತಿರುತ್ತೊಂಡತ್ತೊಗೈ' ಹಾಗೂ 'ತಿರುತ್ತೊಂಡರ್ ತಿರುವಂದಾದಿ' ಮತ್ತು ಸುಂದರಮೂರ್ತಿಯೇ ಸ್ವತಃ ರಚಿಸಿದ 'ತೇವಾರಂ'ಗಳು ಲಿಖಿತ ಆಕರಗಳಾಗಿದ್ದರೆ, ವಾಕ್ಪರಂಪರೆಯಲ್ಲಿ ಹರಡಿಕೊಂಡಿದ್ದ ಸುಂದರಮೂರ್ತಿಯ ಬಗೆಗಿನ ಐತಿಹ್ಯಗಳು ಅಲಿಖಿತ ಆಕರಗಳಾಗಿವೆ. ಹರಿಹರನ ಕಾಲಕ್ಕಾಗಲೇ ನಂಬಿಯಾಂಡರ್ ನಂಬಿಯು ಸಂಕಲಿಸಿದ 'ತಿರುಮುರೈ'ಗಳು ಪ್ರಸಿದ್ಧವಾಗಿದ್ದವು. ಅವುಗಳನ್ನು ಹರಿಹರ ನೋಡಿರುವ ಸಾಧ್ಯತೆಯಿದೆ. ಸುಂದರಮೂರ್ತಿಯು ರಚಿಸಿದ ತೇವಾರಂಗಳಲ್ಲಿ ಅವನ ಬದುಕಿನ ಅನೇಕ ಎಳೆಗಳು ಕಂಡು ಬರುವುದರಿಂದ ಹರಿಹರನಿಗೆ ಅವು ಪ್ರಮುಖ ಆಕರಗಳಾಗಿರಬಹುದಾಗಿದೆ. ನಂಬಿಯಣ್ಣನ ಭಕ್ತಿಮಯವಾದ ಬದುಕನ್ನು ಚಿತ್ರಿಸಲು ಬಹುಶಃ ಅವನ ತೇವಾರಂಗಳು ಹರಿಹರನಿಗೆ ಹೆಚ್ಚಿನ ಸ್ಫೂರ್ತಿ ನೀಡಿರಬಹುದು".[೧೬]

ಪೆರಿಯಪುರಾಣ ಮತ್ತು ನಂಬಿಯಣ್ಣನ ರಗಳೆಗೂ ಇರುವ ಸಾಮ್ಯ-ವೈಷಮ್ಯಗಳನ್ನು ಪರಿಶೀಲಿಸಿದ್ದರೆ ಅದು ಇನ್ನಷ್ಟು ಸ್ಪಷ್ಟವಾಗುತ್ತದೆ.

ಪೆರಿಯಪುರಾಣದಲ್ಲಿ ಸುಂದರಮೂರ್ತಿಯ ಜನನ ವೃತ್ತಾಂತವನ್ನು ನೇರವಾಗಿ ಹೇಳಿಲ್ಲ. ರಗಳೆಯಲ್ಲಿ ನೇರವಾಗಿ ಕಥಾನಾಯಕನ ಪೂರ್ವಜನ್ಮದ ವೃತ್ತಾಂತ ಬಂದಿದೆ. ಕೈಲಾಸದಲ್ಲಿ ಶಿವನ ಸೇವಕನಾಗಿದ್ದ ಸೌಂದರನ ಹೆಸರನ್ನು ಶೇಕ್ಕಿಳಾರ್ ಆಲಾಲಸುಂದರ ಎಂದರೆ ಹರಿಹರ ಪುಷ್ಪದತ್ತ ಎಂದಿರುವನು. ಪಾರ್ವತಿಯ ಸಿರಿಮುಡಿಗೆ ಹೂ ತರಲು ಬಂದವರು ಅನಿಂದಿತೆ,

---

೧೫. ಎಸ್. ವಿದ್ಯಾಶಂಕರ್, ನಂಬಿಯಣ್ಣ - ಒಂದು ಅಧ್ಯಯನ, ಪುಟ - ೩೩೦

೧೬. ಅಡಿಟಿಪ್ಪಣಿ ೧೫ ರಂತೆ, ಪುಟ ೧೫೯.

ಕಮಲಿನಿಯರೆಂದು ಶೇಕ್ಕಿಳಾರ್ ಹೇಳಿದರೆ, ಹರಿಹರ ಇರ್ವರು ವಿಳಾಸಿನಿಯರು ಎಂದಷ್ಟೇ ಹೇಳುವನು. ಶಿವನನ್ನು ನಂಬಿ ಬಂದದ್ದರಿಂದಲೇ ಸುಂದರಮೂರ್ತಿಗೆ 'ನಂಬಿ' ಎಂಬ ಹೆಸರಾಯಿತೆಂದು ಹರಿಹರ ಹೇಳುವನು. ಹರಿಹರನಿಗೆ ಪ್ರಿಯವಾದ ಹೆಸರು ನಂಬಿಯಣ್ಣ. ಪೆರಿಯಪುರಾಣದಲ್ಲಿ ಎಲ್ಲಿಯೂ ನಂಬಿಯಣ್ಣ ಎಂಬ ಪ್ರಯೋಗ ಕಂಡು ಬರುವುದಿಲ್ಲ. ಕೈಲಾಸದಲ್ಲಿನ ಹೆಸರು ಆಲಾಲಸುಂದರರ್ ಆದರೆ, ಮರ್ತ್ಯದಲ್ಲಿನ ಹೆಸರು ನಂಬಿಯಾರೂರ. ಶೇಕ್ಕಿಳಾರನು 'ವನ್‌ತೊಂಡನ್', 'ತಂಬಿರಾನ್ ತೋಳರ್', 'ತಿರುತ್ತೊಂಡನ್' ಎಂದು ಪರ್ಯಾಯವಾಗಿ ನಂಬಿಯಾರೂರನ ಇತರೆ ಹೆಸರುಗಳನ್ನು ತನ್ನ ಪೆರಿಯಪುರಾಣದಲ್ಲಿ ಬಳಸಿರುವರು. ರಗಳೆಯಲ್ಲಿ 'ವನ್‌ತೊಂಡನ್' ಎಂಬ ಹೆಸರಿನ ಪ್ರಸ್ತಾಪವಿಲ್ಲ.

ಶಿವಬ್ರಾಹ್ಮಣನಾದ ಶಡಯಿನಾರ್ ಹಾಗೂ ಇಶೈಜ್ಞಾನಿ ದಂಪತಿಗಳಿಗೆ ಓರ್ವ ಮಗ ಜನಿಸಿದ. ಆ ಮಗುವಿಗೆ ನಂಬಿಯಾರೂರ ಎಂದು ಹೆಸರಿಟ್ಟರು. ಬೀದಿಯಲ್ಲಿ ಸಣ್ಣ ರಥವನ್ನು ಉರುಳಿಸುತ್ತಾ ಆಟವಾಡುತ್ತಿದ್ದ ಮಗುವನ್ನು ಮಕ್ಕಳಿಲ್ಲದ ಆ ನಾಡಿನ ಅರಸನಾದ ನರಸಿಂಗ ಮುನ್ನೈಯರನು ಶಡನಾರನಲ್ಲಿಗೆ ಹೋಗಿ, ಹಿಂದಿನಿಂದ ಇರುವ ಸ್ನೇಹದಿಂದ ನಂಬಿಯಾರೂರನನ್ನು ಬೇಡಿ ಪಡೆದು ತನ್ನ ಮಗನನ್ನಾಗಿ ಮಾಡಿಕೊಂಡನು ಎಂದು ಪುರಾಣದಲ್ಲಿದೆ.

ಹರಿಹರನಲ್ಲಿ, ನಂಬಿಯಣ್ಣ ಇತರೆ ಮಕ್ಕಳೊಡನೆ ಮರದ ಬಂಡಿಯಲ್ಲಿ ಆಡುತ್ತಿರುವಾಗ ಆ ಊರಿನ ದೊರೆಯ ಪಟ್ಟದಾನೆ ಮದದಿಂದ ಮುನ್ನುಗ್ಗಿ ತನ್ನ ಕೈಗೆ ಸಿಕ್ಕಿದವರನ್ನೆಲ್ಲಾ ಸೀಳ್ದು ಬಿಸುಡುತ್ತಾ ಬರುತ್ತದೆ. ಮಕ್ಕಳೆಲ್ಲರೂ ಇದನ್ನು ಕಂಡು ಬಂಡಿಯನ್ನು ಬಿಟ್ಟು ಓಡಿ ಹೋಗಲು 'ಸಿಂಹದ ಮರಿಯಂತೆ' ಪುಟ್ಟ ಬಂಡಿಯಲ್ಲಿದ್ದ ನಂಬಿಯಣ್ಣನಲ್ಲಿಗೆ ಬಂದು ಬಂಡಿಯನ್ನು ಪ್ರದಕ್ಷಿಣೆಮಾಡಿ ಹೋಗುತ್ತದೆ. ಇದನ್ನು ಕೇಳಿದ ರಾಜ ಮಗುವಿನ ಬಗೆಗೆ ಪ್ರೀತಿಯನ್ನು ತಳೆದು, ಅವನ ತಂದೆ-ತಾಯಿಯರನ್ನು ಒಪ್ಪಿಸಿ, ಆ ಮಗುವನ್ನು ತಂದು 'ಸೌಂದರ ಪೆರುಮಾಳೆ' ಎಂದು ಹೆಸರಿಟ್ಟು ಸಾಕುತ್ತಾನೆ. ನರಸಿಂಗಮೊನೆಯರನಿಗೂ ಜಡೆಯನಾಯಿನಾರನಿಗೂ ಹಳೆಯ ಸ್ನೇಹವಿರುವ ಸಂಗತಿ ರಗಳೆಯಲ್ಲಿ ತಿಳಿದು ಬರುವುದಿಲ್ಲ.

ಮದ್ದಾನೆಯ ಪ್ರಸಂಗ ತಮಿಳು ಹಾಗೂ ಸಂಸ್ಕೃತ ಕೃತಿಗಳಲ್ಲಿ ಕಂಡುಬರುವುದಿಲ್ಲ. ಅಂದ ಮೇಲೆ ಇದು ಹರಿಹರನ ಸ್ವಂತ ಸೃಷ್ಟಿ ಇರಬಹುದು. ನಂಬಿಯನ್ನು ಕಾರಣಿಕ ಪುರುಷನೆಂದು ಚಿತ್ರಿಸಲು ಹರಿಹರ ಈ ಪ್ರಸಂಗವನ್ನು ಸೃಷ್ಟಿಸಿಕೊಂಡಿದ್ದಾನೆ ಎಂದು ಹೇಳಬಹುದು.

ವಿವಾಹವಯಸ್ಕನಾದ ನಂಬಿಯಾರೂರನಿಗೆ ಶಡೆಯನಾಯಿನಾರನು ತನ್ನ ಗೋತ್ರದವನೇ ಆದ ಪುತ್ತೂರಿನ ಶಡಂಕವಿ ಶಿವಾಚಾರ್ಯನ ಮಗಳೊಡನೆ ವಿವಾಹ

ಮಾಡುತ್ತಾರೆ. ಎಂದು ಪುರಾಣದಲ್ಲಿದೆ. ರಗಳೆಯಲ್ಲಿ ಪುತ್ರವಿವಾಹ ಚಿಂತೆಯಲ್ಲಿದ್ದ, ನರಸಿಂಗಮೊನೆಯರನ ಬಳಿಗೆ ಮಂತ್ರಿ ತುಂಬುರನು ಬಂದು ಕುಮಾರನ ವಿವಾಹದ ಪ್ರಸ್ತಾಪ ಮಾಡಿದಾಗ ಸಂತಸದಿಂದ ತುಂಬುರ ಮೊದಲಾದ ನಾಲ್ಕಾರು ಮಂದಿ ಮಂತ್ರಿಗಳೊಡನೆ ಆಲೋಚನೆ ಮಾಡಿ, ನಮ್ಮ ಕುಲಕ್ಕೆ ಅನುಕೂಲಳಾದ ಕನ್ಯಾರತ್ನವನ್ನು ಪಟ್ಟಣ ಪ್ರಾಂತ ಪುರಗಳಲ್ಲಿ ಪರಿಭಾವಿಸಿ ಬರುವುದೆಂದು ತುಂಬುರನಿಗೆ ಆಜ್ಞೆ ಮಾಡುವನು. ಅದರಂತೆ ತುಂಬುರ ಎಲ್ಲಾ ಕಡೆ ಅಲೆದು ಮಣಮಂದ ಪುತ್ತೂರಿಗೆ ಬಂದು ಉಪ್ಪರಿಗೆಯಲ್ಲಿದ್ದ ಕನ್ಯಾರತ್ನವನ್ನು ಕಂಡು ಒಪ್ಪಿ ಕನ್ಯೆಯ ತಂದೆ ತಾಯಿಯರಲ್ಲಿ ವಿವಾಹ ಸಂಬಂಧವಾಗಿ ಮಾತನಾಡುವನು. ಪೆರಿಯಪುರಾಣದಲ್ಲಿ ಈ ವಿವರಗಳಾವುವೂ ದೊರೆಯುವುದಿಲ್ಲ.

ನರಸಿಂಗಮೊನೆಯರು ನಂಬಿಯಣ್ಣನಿಗೆ ಯೋಗ್ಯ ಗುರುಗಳಿಂದ ಸಮಸ್ತ ವಿದ್ಯಾಭ್ಯಾಸ ಕೊಡಿಸಿದ್ದು, ಯುವರಾಜ ಪಟ್ಟಕಟ್ಟಿ ಅರ್ಧರಾಜ್ಯ ಕೊಟ್ಟಿದ್ದು, ತುರಗ, ಆನೆ, ಭಂಡಾರ, ವಿಳಾಸಿನಿಯರು, ಮಂತ್ರಿ ತುಂಬುರ, ಮಿತ್ರವರ್ಗ ಮೊದಲಾದುವನ್ನು ಕೊಟ್ಟನು ಎಂದು ಹರಿಹರ ಹೇಳುವ ಈ ವಿವರಗಳು ಶೇಕ್ಕಿಳಾರನಲ್ಲಿ ಬರುವುದಿಲ್ಲ.

ತುಂಬುರನು ಸೌಂದರನಿಗೆ ಹೆಣ್ಣು ಹುಡುಕಲು ಹೋಗುವುದೂ, ಅನುಪಮ ಸುಂದರಿಯೋರ್ವಳನ್ನು ಕಂಡ ತುಂಬುರ ಅವಳನ್ನು, ನಂಬಿಯಣ್ಣನಿಗೆ ತಂದುಕೊಳ್ಳುವುದರ ಬಗೆಗೆ ಮಾತುಕತೆ ನಡೆಸುವುದೂ ಹರಿಹರನ ಸ್ವತಂತ್ರ ಕಲ್ಪನೆ.

ಸೌಂದರ್ಯನಿಗೆ ತನ್ನ ಮದುವೆಯ ಸುದ್ದಿ ತಿಳಿಯಬೇಕೆಂಬ ಆಸೆಯೂ, ನವತಾರುಣ್ಯ ಸಹಜವಾದ ಕುತೂಹಲವು ಆದುದರ ಬಗೆಗೆ, ಪೆರಿಯಪುರಾಣದಲ್ಲಿ ಕಂಡು ಬರದ ಒಂದು ಅಪೂರ್ವ ಚಿತ್ರಣ ರಗಳೆಯಲ್ಲಿ ಕಂಡುಬರುತ್ತದೆ. 'ಕುಮಾರ ನಂಬಿಯು ತನ್ನ ಮನದನ್ನರಾದ ಹತ್ತಾರು ಗೆಳೆಯರೊಡನೆ ಸೇರಿ ತುಂಬುರನನ್ನು ಕರೆಯಿಸಿ, ಆಗಲೇ ನೀನು ತಂದೆಯೊಡನೆ ಏನನ್ನು ಹೇಳುತ್ತಿದ್ದೆ? ಅದರ ವಿವರಗಳೇನು? ಎಂದೆನ್ನುತ ಅನ್ಯಮನಸ್ಕನಾಗಿ ತನ್ನ ಕತ್ತಿಯಿಂದ ಮುಂದಣರತ್ನಸ್ತಂಭವನ್ನು ಚುಚ್ಚುತ್ತ ಸೋಕಿಸುತ್ತಲೂ, ಒಂದೆರಡು ಬಾರಿ ಸಡಿಲವಾದುದನ್ನು ಮೇಲೆ ಹಾರಿಸುತ್ತಲೂ, ಸ್ನೇಹದಿಂದ ವಿವರಣೆ ನೀಡುತ್ತಿದ್ದ ಮಿತ್ರನ ಹೆಗಲ ಮೇಲೆ ಕೈಹಾಕಿ ಸಂತೋಷಗೊಳ್ಳುತ್ತಲೂ ಕನ್ಯೆಯ ಗುಣಗಾನವನ್ನು ಆಲಿಸುತ್ತಿದ್ದ ನಂಬಿಯ ಮನಸ್ಥಿತಿಯನ್ನು ಹರಿಹರ ಮನೋಜ್ಞವಾಗಿ ಚಿತ್ರಿಸಿರುವನು.

ಪೆರಿಯಪುರಾಣದಲ್ಲಿ ಬರುವುದಕ್ಕೆ ಬಿಭಿನ್ನವಾಗಿ ಮದುವೆಯ ಸಂಭ್ರಮದ ವಿವರಗಳು ರಗಳೆಯಲ್ಲಿ ಬಂದಿವೆ. ಹರಿಹರ ಎಲ್ಲಿಯೂ ಪೆರಿಯಪುರಾಣದ ಆ ಭಾಗವನ್ನು ಅನುಸರಿಸಿದಂತೆ ಕಂಡುಬರುವುದಿಲ್ಲ. ಶೇಕ್ಕಿಳಾರನಿಗಿಂತ ಹರಿಹರ ಮದುವೆಯ ಸಂಭ್ರಮದ ವಿವರಗಳನ್ನು ಹೆಚ್ಚು ವಾಸ್ತವವಾಗಿ ನೀಡಿರುವನು.

ಪೆರಿಯಪುರಾಣದಲ್ಲಿ ಎಲ್ಲಿಯೂ ಸೌಂದರನ ಆಪ್ತಮಿತ್ರ ಹಾಗೂ ಮಂತ್ರಿ ತುಂಬುರನ ಪ್ರಸ್ತಾಪ ಬರುವುದಿಲ್ಲ. ಈ ಪಾತ್ರ ಹರಿಹರನ ಸ್ವಂತ ಸೃಷ್ಟಿ.

ಪೆರಿಯಪುರಾಣದಲ್ಲಿ ಶಿವನು ಸಂಸಾರದಲ್ಲಿ ಸಿಕ್ಕಿ ಬೀಳಲಿದ್ದ ನಂಬಿಯನ್ನು ಅದರಿಂದ ತಪ್ಪಿಸಲೋಸುಗ ವೃದ್ಧ ಬ್ರಾಹ್ಮಣನ ವೇಷಧರಿಸಿ ಬರುವನು. ರಗಳೆಯಲ್ಲಿ ಆತನಿಗಾಗಿ ಭೂಮಿಯಲ್ಲಿ ಹುಟ್ಟಿರುವ ಪರವೆಸಂಕಿಲಿಯಿರನ್ನು ಅವನೊಡನೆ ಒಂದುಗೂಡಿಸಿ, ಸಕಲ ಸುಖವನ್ನು ಪೂಜೆಯಾಗಿ ಸ್ವೀಕರಿಸಿ, ಅವನನ್ನು ಕೈಲಾಸಕ್ಕೆ ಕರೆದುಕೊಂಡು ಬರಲು ಭೂಲೋಕಕ್ಕೆ ತಾನು ಹೋಗುತ್ತಿರುವುದಾಗಿ ವಿರೂಪಾಕ್ಷ ಕೈಲಾಸದಲ್ಲಿ ಗಿರಿಜೆಗೆ ಹೇಳುವನು. ನೋಡನೋಡುತ್ತಿದ್ದಂತೆಯೆ ಶಿವ ಶತವೃದ್ಧನಾಗಿ ನಿಲ್ಲುವನು. ಈ ಕೈಲಾಸದ ದೃಶ್ಯ ಪೆರಿಯಪುರಾಣದಲ್ಲಿಲ್ಲ. ಇದು ಹರಿಹರನ ಕಲ್ಪನೆ.

ಹರಿಹರ ಕೊಡುವ ಶತವೃದ್ಧ ವೇಷದ ಶಿವನ ಚಿತ್ರ ಶೇಕ್ಕಿಳಾರನಿಗಿಂತ ಭಿನ್ನ. ಪೆರಿಯಪುರಾಣದಲ್ಲಿ ವೃದ್ಧ ವೇಷದ ಶಿವ ಮದುವೆಯ ಚಪ್ಪರದಲ್ಲಿದ್ದ ಮದುಮಗ ನಂಬಿಯಾರೂರನನ್ನು ಸಂಧಿಸಿ ತನ್ನ ತೊತ್ತೆಂದು ಹೇಳುವನು. ರಗಳೆಯಲ್ಲಿ ವೃದ್ಧ ಬ್ರಾಹ್ಮಣ ಮೊದಲು ಕಾಣುವುದು ವಿವಾಹ ಮಂಟಪದಲ್ಲಿದ್ದ ಹಿರಿಯರನ್ನು, ಮಾನ್ಯರನ್ನು ವಿವಾಹ ಮಂಟಪದಲ್ಲಿ ತನ್ನ ವರ್ತನೆಯಿಂದ ಕೋಲಾಹಲವನ್ನುಂಟುಮಾಡಿ ಆನಂತರ ಸೌಂದರ ಪೆರುಮಾಳೆ ಇರುವ ವನಕ್ಕೆ ಬರುವನು.

ನಂಬಿಯಣ್ಣನಿಗೆ ಶಿವಕರುಣವಾದುದ್ದನ್ನು ಕೇಳಿ ನರಸಿಂಗಮೊನೆಯಿರು ಮಗನಲ್ಲಿಗೆ ಬಂದು ಅವನನ್ನು ಆಲಂಗಿಸದೆ ಅವನಿಗೆ ಅಡ್ಡ ಬಿದ್ದು ಸಿಂಹಾಸನದಲ್ಲಿ ಕೂರಿಸಿ ಆತನ ಪಾದವನ್ನು ತೊಳೆದು ಪಾದೋದಕವನ್ನು ಸ್ವೀಕರಿಸಿ ಕಣ್ಣಿಗೆ ಒತ್ತಿಕೊಳ್ಳುವರು. ನಂಬಿಯನ್ನು ಹೆತ್ತ ತಂದೆ-ತಾಯಿಯಿರೂ ಮಗನಿದ್ದಲ್ಲಿಗೆ ಬಂದಾಗ, ನರಸಿಂಗಮಮೊನೆಯಿರು ಯಿಸ್ವಜ್ಞಾನಿ ಯಿರ ಮುಖವನ್ನು ನೋಡಿ ಮಹಿಮಾಶಾಲಿಯಾದ ಮಗನನ್ನು ಹೆತ್ತ ನಿನ್ನುದರವೆ ಉದರಂ, ಸ್ತನ್ಯಪಾನ ಮಾಡಿಸಿದ ನಿನ್ನ ಮೊಲೆಯ ಮೇಲೆ ಎಂದು ಹಾಡಿಹೊಗಳುವನು.ರಗಳೆಯಲ್ಲಿ ಬರುವ ಈ ಕಥಾಭಾಗ ಪೆರಿಯಪುರಾಣದಲ್ಲಿ ಬರುವುದಿಲ್ಲ. ಇವೆಲ್ಲ ಹರಿಹರನ ಕಲ್ಪನೆ.

ಹರಿಹರನ ಪ್ರಕಾರ, ಪೆರುಮಿಳಲೆ ಕುರುಂಬರು ನಂಬಿಯಣ್ಣನ ಸೇವಕನಾಗಿದ್ದು ಅವರ ಜೊತೆ ಇದ್ದು ನಂಬಿಯಣ್ಣ ಕೈಲಾಸಕ್ಕೆ ಹೋಗಲು ಈತನೂ ಹೋಗುವನು. ಶೇಕ್ಕಿಳಾರನ ಪ್ರಕಾರ ಪೆರುಮಿಳಲೆ ಕುರುಂಬರು ನಂಬಿಯಾರೂರನ ಪರಮ ಭಕ್ತ. ತಾನಿರುವೆಡೆಯಲ್ಲೇ ಇದ್ದು ನಂಬಿ ಕೈಲಾಸಕ್ಕೆ ಹೋಗುವುದನ್ನು ಅರಿತು ಅವನಿಗಿಂತ ಮೊದಲೇ ಕೈಲಾಸವನ್ನು ಸೇರುವನು.ಹರಿಹರ ನಂಬಿಯಣ್ಣನ ಜೊತೆ ಪೆರುಮಿಳಲೆ ಕುರುಂಬರು ಇದ್ದನೆಂದು ಹೇಳಿದರೆ, ಶೇಕ್ಕಿಳಾರ್ ಇವರು ಪರಸ್ಪರ ಭೇಟಿ ಮಾಡಿರಲೇ ಇಲ್ಲ. ಜೊತೆಯಲ್ಲಿ ಇರಲೇ ಇಲ್ಲ ಎಂದು ಚಿತ್ರಿಸಿದ್ದಾನೆ.

ಶೇಕ್ಕಿಳಾರನ ನಿರೂಪಣೆಗಿಂತ ಸಂಪೂರ್ಣ ಭಿನ್ನವಾಗಿ ಪೆರುಮಿಳಲೆಯ ಕುರುಂಬರ ಪಾತ್ರವು ರಗಳೆಯಲ್ಲಿ ಮೂಡಿದೆ.

ನಂಬಿ-ಪರವೆಯರ ಪ್ರಥಮ ಭೇಟಿಯ ಪ್ರಸಂಗ ರಗಳೆ ಮತ್ತು ಪೆರಿಯಪುರಾಣ ಎರಡರಲ್ಲೂ ಭಿನ್ನವಾಗಿದೆ. ಪುರಾಣದ ಪ್ರಕಾರ ನಂಬಿ ಪರವೆಯನ್ನು ದೇವಾಲಯದ ಬಳಿ ನೋಡಿ ಅನುರಕ್ತನಾಗುತ್ತಾನೆ. ಪರವೆಯೂ ಅವನಲ್ಲಿ ಅನುರಕ್ತೆಯಾಗುವಳು. ರಗಳೆಯಲ್ಲಿ ಪರವೆ-ನಂಬಿಯಣ್ಣರ ಪ್ರೇಮಪ್ರಸಂಗವು ಸಹಜವಾಗಿ ನಿರೂಪಿತವಾಗಿದೆ. ಪರವೆ ದೇವದಾಸಿ ಕುಲದವಳು. ತಾನು ಪುಷ್ಪವತಿಯಾದಾಗ ತನ್ನ ಕುಲದ ಸಂಪ್ರದಾಯದಂತೆ ತನ್ನ ಪ್ರಿಯಕರನನ್ನು ತಾನೇ ಆರಿಸಿಕೊಂಡು 'ಪುಷ್ಪಮಾಲಾಬದ್ಧ'ವೆಂಬ 'ಕಾಮನಹಬ್ಬ'ದಲ್ಲಿ ಪುರುಷನೊಬ್ಬನಿಗೆ ಅರ್ಪಿಸಿಕೊಂಡಳೆಂದು ಹರಿಹರ ಚಿತ್ರಿಸುತ್ತಾನೆ. "ಶೇಕ್ಕಿಳಾರನಂತೆ ಹರಿಹರನು ಅವರು ಕಾವ್ಯದ ನಾಯಕ-ನಾಯಕಿಯರಂತೆ ಪರಸ್ಪರ ಪ್ರೇಮಿಸಿ ವಿವಾಹವಾದರೆಂದು, ಹೇಳುವುದೇ ಇಲ್ಲ. ಅವರೀರ್ವರೂ ಪರವೆ-ನಂಬಿಯಣ್ಣರ ಪ್ರೇಮಪ್ರಸಂಗವನ್ನು ನೋಡುವ ದೃಷ್ಟಿ, ನಿರೂಪಿಸುವ ರೀತಿ ಭಿನ್ನರೂಪದ್ದು. ಶೇಕ್ಕಿಳಾರನನ್ನು ಹರಿಹರನು ಅನುಸರಿಸಿಲ್ಲವೆಂಬುದಕ್ಕೆ ಇದು ಬಲವಾದ ಆಧಾರಗಳಲ್ಲಿ ಒಂದು". [೧೭]

ಪುರಾಣದಲ್ಲಿ ಸುಂದರಮೂರ್ತಿ ಭಕ್ತರಿಗೆ ಭಕ್ತನಾಗಬೇಕೆಂಬ ಬಯಕೆಯಲ್ಲಿ ದೇವಾಶ್ರಯದ ಮಂಟಪಕ್ಕೆ ಬಂದಾಗ, ಅಲ್ಲಿ ನೆರೆದಿದ್ದ ಅಸಂಖ್ಯ ಅಡಿಯವರನ್ನು ನೋಡಿ 'ಇವರಿಗೆ ಸೇವಕನಾಗಿ ಮಾಡಿಕೊಳ್ಳುವ ದಿನ ಯಾವ ದಿನವೋ' ಎಂದು ಮನದಲ್ಲಿ ನೆನೆದು ದೇವಾಲಯದೊಳಕ್ಕೆ ಹೋದ. ಶಿವನು ನಂಬಿಗೆ, ಅವನು ಈ ಸಂದರ್ಭದಲ್ಲಿ ಬಯಸುತ್ತಿದ್ದ ಬಯಕೆಯನ್ನು ಈಡೇರಿಸಿಕೊಡಬೇಕೆಂದು ಮನಸ್ಸು ಮಾಡಿ, ಮಹಿಮಾವಂತರಾದ ಭಕ್ತರುಗಳ ಸೇವಾಪರಂಪರೆಯನ್ನು ಅರಿತುಕೊಳ್ಳುವಂತೆ ನಂಬಿಗೆ ಅನುಗ್ರಹ ಮಾಡಿ ಮತ್ತೆ ಅವರುಗಳ ಮಹಿಮೆಯನ್ನು ತಿಳಿಸುವನು. ಪರಮೇಶ್ವರನು 'ಕ್ರಮಪ್ರಕಾರವಾಗಿ ಆ ಅಡಿಯವರನ್ನು ವಂದಿಸಿ, ನೀನು ಹುರುಳ ತುಂಬಿದ ಪದ್ಯಮಾಲಿಕೆಯನ್ನು ಹಾಡು' ಎಂದು ಅನುಗ್ರಹಿಸಿದನು. ಅದಕ್ಕೆ ನಂಬಿಯು ಪದ್ಯಮಾಲೆಯನ್ನು ಹಾಡುವ ರೀತಿಯನ್ನು ನನಗೆ ದಯಪಾಲಿಸು' ಎಂದು ಬೇಡಲು, ಅದಕ್ಕೆ ಪರಶಿವನು 'ತಿಲ್ಲೈವಾವಿಂದಣರ್ತಮ್ಮಡಿಯಾರ್ಕು ಮಡಿಯೇನ್' (ಚಿದಂಬರದಲ್ಲಿ ಬಾಳುವ ಬ್ರಾಹ್ಮಣರಾದ ಅಡಿಯವರ ಅಡಿಯಾಳು ನಾನು) ಎಂದು ಆರಂಭಿಸಿ ಸ್ತೋತ್ರಮಾಲೆಯನ್ನು ಹಾಡುವವನಾಗು ಎಂದು ಅನುಗ್ರಹಿಸಿದನು. ನಂಬಿಯು ಪರಶಿವನು ಎತ್ತಿಕೊಟ್ಟ ವಾಕ್ಯವನ್ನೇ ಮೊದಲಾ ಗಿಟ್ಟುಕೊಂಡು 'ತಿರುತ್ತೊಂಡತ್ತೊಗೈ' ಎಂಬ ತಿರುಪದಿಕವನ್ನು ರಚಿಸಿದನು. ಈ ಪ್ರಸಂಗ ಹರಿಹರನ ರಗಳೆಯಲ್ಲಿ ಬರುವುದಿಲ್ಲ.

---

೧೭ ಎಸ್. ವಿದ್ಯಾಶಂಕರ್, ನಂಬಿಯಣ್ಣ- ಒಂದು ಅಧ್ಯಯನ, ಪುಟ-೧೯೯.

ನಂಬಿಯಾರೂರನನ್ನು ಪರೀಕ್ಷಿಸಲು ಶಿವ ಹಾಗೂ ಪಾರ್ವತಿಯರು ಒಕ್ಕಲಿಗ ಒಕ್ಕಲಗಿತ್ತಿಯ ವೇಷಧರಿಸಿ ಗದ್ದೆಯಲ್ಲಿ ನಾಟಿ ಕೆಲಸ ಮಾಡಿದ ಪ್ರಸಂಗ ಶೇಕ್ಕಿಳಾರನಲ್ಲಿ ಕಂಡು ಬರುವುದಿಲ್ಲ. ಹರಿಹರನಲ್ಲಿ ಮಾತ್ರ ಕಂಡುಬರುತ್ತದೆ. ಹರಿಹರನ ಪ್ರಕಾರ ಈ ಘಟನೆ ನಡೆದುದು ತಿರುಕೊಳಲಿನಲ್ಲಿ

ರಗಳೆಯಲ್ಲೂ ಪೆರಿಯಪುರಾಣದಲ್ಲಿ ಬರುವ ಬತ್ತದ ಪ್ರಸಂಗ ಬರುತ್ತದೆ. ಆದರೆ ಎರಡರಲ್ಲೂ ಬೇರೆಬೇರೆಯಾಗಿ ಬರುತ್ತದೆ. ನಂಬಿಯು ತನ್ನವರೊಡನೆ ತಿರುಕೊಂಡೆಯೂರ ಶಿವದೇವಾಲಯಕ್ಕೆ ಬಂದು ಅಲ್ಲಿನ ಶಿವನನ್ನು ಕುರಿತು ತನ್ನ ಭಕ್ತ ಕಿಳವರನಿಗಾಗಿ ಭತ್ತವನ್ನು ಬೇಡುತ್ತಾನೆ. ಶಿವ ಅನುಗ್ರಹಿಸುತ್ತಾನೆ. ಪೆರಿಯಪುರಾಣದಲ್ಲಿ ನಂಬಿ ಭತ್ತವನ್ನು ಕೊಡುವಂತೆ ಶಿವನನ್ನು ಬೇಡುವುದೇ ಇಲ್ಲ. ಶಿವನೇ ನಂಬಿಯಣ್ಣನ ಭಕ್ತನಾದ ಕೊಂಡೆಯಾರ್ ಕಿಳವರನ ಕಷ್ಟವನ್ನು ನೋಡಿ ಕನಿಕರಿಸಿ ಭತ್ತವನ್ನು ಅನುಗ್ರಹಿಸುವನು.

ಪೆರಿಯಪುರಾಣದಲ್ಲಿ ಹರಿಹರ ಕೊಡುವ ತಿರುನಾಳಿನ ವೈಭವದ ದೃಶ್ಯವಾಗಲೀ, ಪಾರ್ವತೀ ಪರಮೇಶ್ವರರು ಮಾನವರ ನಡುವೆ ಮಾನವರಾಗಿ ಅವರ ಸುಖ ಸಂತೋಷಗಳಲ್ಲಿ ತಾವೂ ಭಾಗಿಗಳಾಗಿ ತಿರುವಾರೂರಿನ ಬೀದಿ ಬೀದಿಗಳಲ್ಲಿ ಉತ್ಸವದಿಂದ ನಡೆದು ಬರುವ ಅಪೂರ್ವ ದೃಶ್ಯವಾಗಲೀ, ಉತ್ಸವದಲ್ಲಿ ಪರವೆ-ನಂಬಿಯಣ್ಣರನ್ನು ಪಾಲ್ಗೊಳ್ಳುವಂತೆ ಹೇಳಿ ಕಳುಹಿಸುವ ಪ್ರಸಂಗವಾಗಲೀ ಬರುವುದಿಲ್ಲ. ಇವೆಲ್ಲವೂ ಹರಿಹರನ ಸುಂದರ ಕಲ್ಪನೆಗಳು.

ರಗಳೆಯಲ್ಲಿ ಬರುವ ಚೇರಮನ ಕಥೆ ಶೇಕ್ಕಿಳಾರನ ನಿರೂಪಣೆಗಿಂತ ಬೇರೆಯಾಗಿದೆ. ಹರಿಹನ ಪ್ರಕಾರ 'ಕಾರಣಿಕ'ನಾದ ಸೌಂದರನು, ಶಿವನನ್ನು ಬೇಡುತ್ತಾ, ಸುರತಸುಖಕ್ಕಾಗಿ ಪರವೆ-ಸಂಕಿಲಿಯರ ಮನೆಗೆ ಶಿವನನ್ನು ಕುಂಟಣಿಮಾಡಿ ಓಡಾಡಿಸಿದ ಸುದ್ದಿ ಎಲ್ಲಡೆ ಹರಡಲು, ಆ ಮಹಾಪುರುಷನನ್ನು ನೋಡಬೇಕೆನ್ನುವ ಕುತೂಹಲದಿಂದ ಪರಮ ಶಿವಾರ್ಚಕನಾದ ಚೇರಭೂಪ, ತಿರುವಾರೂರಿಗೆ ಬಂದನು. ಗಜ್ಜುಗದಾಟದ ಮೂಲಕ ಶಿವಪೂಜೆ ಮಾಡುತ್ತಿದ್ದ ನಂಬಿಯಣ್ಣನ ನಿಲುವನ್ನು ಕಂಡು ಚೇರಮ ಅಚ್ಚರಿಗೊಂಡು, ಅವನಿಗೆ ನಮಸ್ಕರಿಸುವನು. ಅಂದಿನಿಂದ ನಂಬಿ – ಚೇರಮ ಆತ್ಮೀಯ ಮಿತ್ರರಾಗುವರು.

"ನಂಬಿಯಣ್ಣ ಗಜ್ಜುಗದಾಟದ ಮೂಲಕವೂ ಶಿವಪೂಜೆ ಮಾಡುತ್ತಿದ್ದ ವರ್ಣನೆ ರಗಳೆಯಲ್ಲಿದೆ. ಪುರಾಣದಲ್ಲಿಲ್ಲ".[೧೮] ಶೇಕ್ಕಿಳಾರನಿಗೆ ತಿಳಿಯದಿದ್ದ ಈ ಪ್ರಸಂಗ ಹರಿಹನಿಗೆ ತಿಳಿದಿದೆ. ಇದು ಹರಿಹರನ ಸ್ವಂತ ಕಲ್ಪನ.

ಸಂಕಿಲಿನಾಚಿಯ ಪ್ರಸಂಗ ಹರಿಹರ-ಶೇಕ್ಕಿಳಾರರಲ್ಲಿ ಏಕಪ್ರಕಾರವಾಗಿ ಬಂದಿಲ್ಲ. ನಂಬಿ-ಸಂಕಿಲಿಯರನ್ನು ಶಿವ ಒಂದುಗೂಡಿಸುವ ಪ್ರಸಂಗ ರಗಳೆಯಲ್ಲಿ ಸ್ವಾರಸ್ಯಪೂರ್ಣವಾಗಿ ಬಂದಿದೆ. ರಗಳೆಯಲ್ಲಿ ಸಂಕಿಲಿಯ ತಂದೆ-ತಾಯಿ

೧೮. ಉದ್ಧೃತ, ಜಿ. ಎಸ್. ಶಿವರುದ್ರಪ್ಪ, ಸಮಗ್ರ ಕನ್ನಡ ಸಾಹಿತ್ಯಚರಿತ್ರೆ, ಸಂಪುಟ ೩, ಪುಟ - ೨೬೭

ಈಶಾನಸೆಟ್ಟಿ, ಶಿವದೇವಿ ಎಂದಿದೆ. ಪೆರಿಯ ಪುರಾಣದಲ್ಲಿ ಸಂಕಿಲಿಯ ತಂದೆ ತಿರುಜ್ಞಾಯಿರ್‌ಕಿವಿವರ್. ತಾಯಿಯ ಹೆಸರನ್ನು ಹೇಳಲಾಗಿಲ್ಲ.

ಪೆರಿಯಪುರಾಣ ಹಾಗೂ ರಗಳೆಯಲ್ಲಿ ಸಮಾನವಾಗಿರುವ ಅಂಶವೆಂದರೆ ಶಿವನೇ ಇಲ್ಲದ ದೇವಾಲಯದಲ್ಲಿ, ಪ್ರತಿಜ್ಞೆ ಕೊಡುವ ನಂಬಿಯಣ್ಣನ ಪೂರ್ವ ನಿಶ್ಚಿತ ಸಂಚನ್ನು ಶಿವ ವ್ಯರ್ಥಗೊಳಿಸುವುದು.

ಪುರಾಣದ ಪ್ರಕಾರ, ಪರವೆಯನ್ನು ಮರೆತು ಸಂಕಿಲಿಯ ಮೋಹದಲ್ಲಿ ಮೈಮರೆತ್ತಿದ್ದ ನಂಬಿಯನ್ನು ಎಚ್ಚರಗೊಳಿಸಿದ್ದು, ತಿರುವಾರೂರಿನ ವಸಂತೋತ್ಸವ ಸಮಯದಲ್ಲಿ ನಂಬಿಯ ಮನಸ್ಸಿಗೆ ಉಂಟಾದ ಪರವೆಯನ್ನು ಕೂಡಬೇಕೇಂಬ ಮನೋವಿಕಾರ. ಹರಿಹರನಲ್ಲಿ 'ಕಟ್ಟಕರ ಮಗಂ ಕೆಟ್ಟುಪೋದಪನೆಂದು ಕೊಟ್ಟ ನಂಬುಗೆಯಿಂ ನೆನದು ಕಾಮಾರಿ ಕರುಣದಿಂ ಮಾರುತನಂ ನೆನೆಯೆ ನಡುಗುತಂ ಬಂದು ಮೈಯಿಕ್ಕಿ ನಿಂದು ಮುಂದಿರ್ದ ಗಂಧವಹನಂ ಕಂಡಭಯಮನಿತ್ತು ನೀಂ ತಿರುವಾರೂರ್ಗೆ ಬೇಗದಿಂ ಪೋಗಿ ಕೇಳಿವನದ ಕದಂಬಾಮೋದಮಂ, ಸರೋಜಾಕಾರದ ಸೌರಭ್ಯಮಂ ಪರವೆಯರನರಸುಯ್ಯ ಸವಿಗಂಪುಮಂ ಎಮ್ಮ ಪ್ರಸಾದದ ಪರಿಮಳಮುಮಂ ಕೊಂಡು ಬಂದು ಸಂಕಿಲೆಯೊಳಿಪ್ಪ ಸೌಂದರ ಸರ್ವೇಂದ್ರಿಯಗಳೊಳ್ಸಲಿಸಿ ಕೊಂಡೊಯ್ವುದು' (ಸ್ಥಲ ೧೫ ಸಾ ೬೬-೭೨) ಎಂದು ನೇಮಿಸಿದ್ದರಿಂದ ನಂಬಿ ಪರವೆಯ ಬಳಿಗೆ ಬಂದನೆಂದಿದೆ.

ನಂಬಿಯಣ್ಣನೆಂಬ ಹೆಸರಿನ ಬಾಲಕನನ್ನು ಆರೂರನು ಬದುಕಿಸಿದ ಪವಾಡ ಕಥೆ ಪುರಾಣದಲ್ಲೂ ಬರುತ್ತದೆ. ಅಲ್ಪಸ್ವಲ್ಪ ವ್ಯತ್ಯಾಸಗಳೊಂದಿಗೆ ಈ ಪವಾಡ ಕಥೆ ಹರಿಹರನಲ್ಲಿ ಬಂದಿದೆ. ಪೆರಿಯಪುರಾಣದಲ್ಲಿ ಆರೂರನು ದುಃಖಕ್ಕೆ ಕಾರಣವನ್ನು ಊರಿನ ಬ್ರಾಹ್ಮಣರನ್ನು ಕೇಳಿ ತಿಳಿಯುವನು. ರಗಳೆಯಲ್ಲಿ ಮೊಸಳೆ ನುಂಗಿದ ಮಗುವಿನ ತಂದೆ-ತಾಯಿಯರೇ ತಮ್ಮ ಶೋಕದ ಕಾರಣ ತಿಳಿಸುವರು. ಪೆರಿಯಪುರಾಣದಲ್ಲಿ ಆರೂರನು ಮೊಸಳೆ ನುಂಗಿದ ಮಗುವನ್ನು ಕೊಡುವಂತೆ ಪದಿಕವೊಂದನ್ನು ಹಾಡಿ ಶಿವನಲ್ಲಿ ಬೇಡಿದಾಗ, ಮೊಸಳೆ ದಡಕ್ಕೆ ಬಂದು ಮಗುವನ್ನು ಉಗುಳಿ ಹೋಗುತ್ತದೆ. ರಗಳೆಯಲ್ಲಿ ಮೊಸಳೆ ನುಂಗಿದ ಮಗುವಿನ ತಂದೆತಾಯಿಯರಿಂದ ದುಃಖದ ಕಥೆ ತಿಳಿದ ನಂಬಿಯು, ಶಿವನನ್ನು ಮಗುವನ್ನು ಕೊಡುವಂತೆ ಕೇಳಿದ ಕೂಡಲೆ, ನಡುನೀರಿನಿಂದ ಮೇಲೆದ್ದು ಮಗು ನಡೆದು ಬರುವುದು.

ಚೇರಮ-ನಂಬಿ ಈರ್ವರೂ ಜೊತೆಗೂಡಿ ಕೈಲಾಸಕ್ಕೆ ಹೋಗುವಾಗ ದಾರಿ ಮಧ್ಯದಲ್ಲಿ ತಲೆಯೂರಿ ಬರುತ್ತಿದ್ದ ಕಾರಿಕಾಲಮ್ಮೆಯರನ್ನು ಕಂಡು 'ಎಂದಿಗೆ ಬರ್ಪಿರೆಯಮ್ಮ' ಎಂದು ನಕ್ಕುನುಡಿಯುವನು. ಈ ಪ್ರಸಂಗ ಪೆರಿಯಪುರಾಣದಲ್ಲಿ ಬರುವುದಿಲ್ಲ. ಇದು ಹರಿಹರನ ಸ್ವಂತ ಸೃಷ್ಟಿ.

ಪರವೆ ಸಂಕಿಲಿಯಿರು ನಂಬಿಯಣ್ಣನು ಕೈಲಾಸಕ್ಕೆ ಹೋದ ಮೇಲೆ ಕೈಲಾಸವಾಸಿಗಳಾರೆಂದು ಪುರಾಣದಲ್ಲಿದೆ. ಹರಿಹರನಲ್ಲಿ ಅವರು ನಂಬಿಗಿಂತ ಮುನ್ನವೇ ಕೈಲಾಸವನ್ನು ಸೇರಿರುತ್ತಾರೆ. ಅವರ ಅಗಲಿಕೆಯೂ ಇವನಿಗೆ ಪರಶಿವನತ್ತ ಸಾಗುವ ಮೆಟ್ಟಿಲಾಗುವಂತೆ ಹರಿಹರ ನಿರೂಪಿಸಿದ್ದಾನೆ.

ಹರಿಹರ ನಂಬಿಯಣ್ಣನು ಶಿವನನ್ನು ಕುರಿತು –

ಮುದದಿಂದ ಸಾದುಕತ್ತುರಿಯನೀವುದುದೇವ
ಬೆನಕಂಗೆ ತಾರಕಾರಿಗೆ ಎನಗೆ ನೀವಿಂದು
ಧನಮುಳ್ಳದಂ ತ್ರಯೋಭಾಗಮಾಗಿರಲಿಂದು
ಹಚ್ಚಿ ಕೊಟ್ಟಲ್ಲದಾನಾರೋಗಿಸಲ್ಕಾನೀಯೆ
ಅಚ್ಚಿಗಂಗೊಳಿಸುವೆನದೊಂದಡಿಯನಿಡಲೀಚುಿ

(ಸ್ಥಲ ೧೭, ಸಾಲು ೯೪–೯೮)

ಎಂದು ಹೇಳುವನು. ಈ ವಿಷಯ ಪೆರಿಯಪುರಾಣದಲ್ಲಿಲ್ಲ. ಪುರಾಣದಲ್ಲಿಲ್ಲದ ಕೆಲವು ಸಂಗತಿಗಳು ರಗಳೆಯಲ್ಲಿವೆ. ಸೋಮಾಸಿಮಾರನೆಂಬ ಭಕ್ತನ ಇಚ್ಛೆಯಂತೆ ನಂಬಿಯಣ್ಣನು ಶಿವನನ್ನು ಯಾಗಕ್ಕೆ ಕರೆದೊಯ್ಯುವ ವಿಷಯ ಪುರಾಣದಲ್ಲಿಲ್ಲ. ರಗಳೆಯಲ್ಲಿದೆ.

ಹೀಗೆ ಪೆರಿಯಪುರಾಣದಲ್ಲಿಲ್ಲದ ಹೊಸ ವಿಷಯಗಳು, ಸನ್ನಿವೇಶಗಳು ಇಲ್ಲಿ ಬಂದಿವೆ. ಪೆರಿಯಪುರಾಣದಲ್ಲಿರುವ ಅನೇಕ ಪ್ರಸಂಗಗಳೂ ಇಲ್ಲಿ ಬಂದಿವೆ.

ಇಬ್ಬರೂ ಕವಿಗಳು ಒಂದೇ ಮೂಲದಿಂದ ವಿಷಯ ಸಂಗ್ರಹ ಮಾಡಿರುವ ಸಂಭವನೀಯತೆಯೂ ಇದೆ. " ಎರಡು ಮಹಾಕೃತಿಗಳ ಕಥಾವಸ್ತುವು ಬಹುಮಟ್ಟಿಗೆ ಒಂದೇ ಆದ ಮಾತ್ರಕ್ಕೆ ಒಂದಕ್ಕೆ ಇನ್ನೊಂದು ಉಪಕೃತ ಎಂದು, ಬೇರೆಯ ಆಧಾರಗಳ ಅಭಾವವಿದ್ದಾಗ, ನಿರ್ಣಯಿಸುವುದು ಉಚಿತವಲ್ಲವೆಂದು ತೋರುತ್ತದೆ."[೧೯] ಹರಿಹರನಲ್ಲಿ ಪುರಾಣದಲ್ಲಿಲ್ಲದ ಅನೇಕ ಹೊಸ ಸಂಗತಿಗಳು ಕಂಡುಬರುತ್ತವೆ. ಇವು ಹರಿಹರನ ಸ್ವಂತ ಪ್ರತಿಭೆಯಿಂದ ಮೂಡಿದ ಸುಂದರ ಕಲ್ಪನೆಗಳು ಅಥವಾ ತಿರುತ್ತೊಂಡತ್ತೊಗೈ ತಿರುವಂದಾದಿ, ತೇವಾರಗಳು, ಜನಪದದಲ್ಲಿ ಹರಡಿದ್ದ ಪುರಾತನರ ಬಗೆಗಿನ ಐತಿಹ್ಯಗಳು–ಇವುಗಳಿಂದ ಸ್ವೀಕರಿಸಿ ತನ್ನ ದೈವದತ್ತ ಪ್ರತಿಭೆಯಿಂದ ಪುರಾತನರ ಕಥೆಗಳನ್ನು ಹರಿಹರ ರಚಿಸಿರಬೇಕು.

"ಪಂಪಾಕ್ಷೇತ್ರ ಪವಿತ್ರ ಶೈವಕ್ಷೇತ್ರ, ಅದು ಗಿರಿಜೆ ತಪಸ್ಸು ಮಾಡಿದ ಪವಿತ್ರಭೂಮಿ. ಅಲ್ಲಿಗೆ ತಮಿಳುನಾಡಿನಿಂದ ಶೈವಭಕ್ತರು ಯಾತ್ರಾರ್ಥಿಗಳಾಗಿ ಬರುತ್ತಿದ್ದರಬಹುದು. ಅವರಿಂದ ಹರಿಹರ ಪುರಾತನರ ಬಗೆಗೆ ವಿಷಯ ಸಂಗ್ರಹಣೆ ಮಾಡಿರಬಹುದು. ಅವನ ಕೃತಿಗಳು ಕನ್ನಡ ನಾಡಿನ ಗಡಿದಾಟಿ ಹೊರಗೂ ಹೋಗಿ ತಮ್ಮ ವಿಶಿಷ್ಟ ಗುಣಗಳಿಂದ ಸಾಹಿತ್ಯೋಪಾಸಕರ ಮನ ಸೂರೆಗೊಂಡಿರಬಹುದು.

೧೯. ಎಚ್. ದೇವೀರಪ್ಪ, ಶರಣಚರಿತಮಾನಸಂ. ಪುಟ ೨೦೦

ಹರಿಹರನ ಆರಾಧಕರು ಕನ್ನಡೇತರ ಸ್ಥಳಗಳಲ್ಲೂ ಇದ್ದಿರಬಹುದು. ಅವರು ತಮ್ಮ ಆರಾಧ್ಯದೈವವನ್ನು ನೋಡಲು ಬಂದು ಅವನೊಡನೆ ವಿಚಾರವಿನಿಮಯ ಮಾಡಿ ವಿಷಯ ಸಂಗ್ರಹಣೆ ಮಾಡಿರಬಹುದು. ಹರಿಹರನಿಗೆ ತಮಿಳು ಬರುತ್ತಿತ್ತು. ಶಿವಕ್ಷೇತ್ರಗಳ ದರ್ಶನಾರ್ಥವಾಗಿ ತಮಿಳುನಾಡನ್ನು ಸುತ್ತಿರಬಹುದು. ಕಣ್ಣಿಗೆ ಕಟ್ಟುವಂತೆ ತಿರುನಾಳಿನ ವರ್ಣನೆ ಮಾಡಿರುವುದನ್ನು ಕಂಡಾಗ, ತಮಿಳುನಾಡಿನ ಸಾಂಸ್ಕೃತಿಕ ಚಟುವಟಿಕೆಗಳನ್ನು ಆತ ನೋಡಿಲ್ಲವೆಂದು ಹೇಳಲು ಸಾಧ್ಯವಾಗದು." [೧೦]

ಇದುವರೆವಿಗೂ ಗಮನಿಸಿದ ವಿದ್ವಾಂಸರುಗಳ ಅಭಿಪ್ರಾಯ ಹಾಗೂ ಪಡರಿಯಪುರಾಣ ಮತ್ತು ಪುರಾತನರ ರಗಳೆಗಳನ್ನು ಪಾತ್ರಚಿತ್ರಣ, ಸನ್ನಿವೇಶ, ವರ್ಣನೆಗಳ ಹಿನ್ನೆಯಲ್ಲಿ ಪರಿಶೀಲಿಸಿ ನೋಡಿದ ಮೇಲೆ ಈ ಅಭಿಪ್ರಾಯಕ್ಕೆ ಬರಬಹುದು.

೧. ಹರಿಹರ ತಿರುನಾಳಿನ ವೈಭವದ ವರ್ಣನೆ ಮಾಡಿರುವುದರಿಂದ ಆತ ತಮಿಳುನಾಡನ್ನು ಸಂದರ್ಶಿಸಿ ಪುರಾತನರ ಬಗೆಗಿನ ವಿವರಗಳು ಸಂಗ್ರಹಿಸಿದ್ದಾನೆ ಎಂಬ ನಿಲುವಿಗೆ ಬರಬಹುದು.
೨. ಪುರಾತನರನ್ನು ಕುರಿತು ಸಂಸ್ಕೃತ ಕೃತಿಗಳು ಹರಿಹರನ ನಚಿತರದಲ್ಲಿ ರಚಿಸಲ್ಪಟ್ಟವಾದರಿಂದ ಇವುಗಳಿಂದ ಕವಿ ಕಥಾವಸ್ತುವನ್ನು ಆಯ್ದುಕೊಳ್ಳುವ ಸಂಭವ ಇಲ್ಲವೇ ಇಲ್ಲ.
೩. ಪೆರಿಯಪುರಾಣದಲ್ಲಿಲ್ಲದ್ದ ಅನೇಕ ಸಂಗತಿಗಳು ರಗಳೆಗಳಲ್ಲಿರುವುದರಿಂದ ಹರಿಹರ ಇವುಗಳನ್ನು ತಿರುತ್ತೊಂಡತೊಹೈ, ತಿರುಅಂದಾದಿ, ತೇವಾರಂ ಮತ್ತು ಜನಪದರಲ್ಲಿದ ಐತಿಹ್ಯಗಳಿಂದ ಸ್ವೀಕರಿಸಿರಬಹುದು. ಕೆಲವು ಸಂಗತಿಗಳು ಹರಿಹರನ ಸ್ವಂತ ಸೃಷ್ಟಿ ಎಂದೇ ಹೇಳಬಹುದು.
೪. ಹರಿಹರನ ಪುರಾತನರ ರಗಳೆಗಳ ಕಥಾವಸ್ತುವಿಗೂ ಮತ್ತು ಪೆರಿಯಪುರಾಣದ ಕಥಾವಸ್ತುವಿಗೂ ಪಾತ್ರ, ಸನ್ನಿವೇಶ, ವರ್ಣನೆಗಳಲ್ಲಿ ಬಹಳಷ್ಟು ವ್ಯತ್ಯಾಸಗಳು ಕಂಡುಬರುವುದರಿಂದ ಒಟ್ಟಾರೆಯಾಗಿ ಪೆರಿಯಪುರಾಣ ಹರಿಹರನ ಪುರಾತನರ ರಗಳೆಗೆ ಆಕರವಾಗಿಲ್ಲ ಎಂದು ಹೇಳಬಹುದು.

ಪಾತ್ರ, ಸನ್ನಿವೇಶಗಳ ಹಿನ್ನೆಲೆಯಲ್ಲಿ ಗಮನಿಸಿ ನೋಡಿದಾಗಲೂ ಇದೇ ಅಭಿಪ್ರಾಯ ಹೊರಹೊಮ್ಮುತ್ತದೆ. ಆ ಪ್ರಯತ್ನವನ್ನು ಎರಡೂ ಕಾವ್ಯಗಳನ್ನು ಹೋಲಿಸಿ ನೋಡುವಾಗಲೇ ಮಾಡಿದ್ದೇನೆ. ಆದರೂ ಮುಖ್ಯ ಸನ್ನಿವೇಶ, ವರ್ಣನೆ ಇತ್ಯಾದಿಗಳನ್ನು ಮಾತ್ರ ಈಗ ಪ್ರತ್ಯೇಕವಾಗಿ ಗಮನಿಸುವುದರ ಜೊತೆಗೆ, ಸಾಂಸ್ಕೃತಿಕ ನೆಲೆಯಲ್ಲೂ ರಗಳೆಗಳನ್ನು ವಿವೇಚಿಸಿದ್ದೇನೆ.

### ಪಾತ್ರ ಚಿತ್ರಣ :

ಶಿವಶರಣ ಶಿವಶರಣೆಯರೇ ಪೆರಿಯಪುರಾಣ ಮತ್ತು ರಗಳೆಗಳ ನಾಯಕಿಯರು. ಅವರೆಲ್ಲ ಭಕ್ತಜೀವನದ ಮಹತ್ವವನ್ನು ಸಾರುವ, ಭಕ್ತಿ ನಿಷ್ಠೆಗಳ

೧೦. ಉದ್ಧೃತ ಜಿ. ಎಸ್. ಶಿವರುದ್ರಪ್ಪ, ಸಮಗ್ರ ಕನ್ನಡ ಸಾಹಿತ್ಯಚರಿತ್ರೆ, ಸಂಪುಟ ೩, ಪುಟ ೨೮೯.

ಬಲದಿಂದ ಮಾನವೀಯ ಮಟ್ಟದಿಂದ ಮೇಲಕ್ಕೇರಿದ ಪಾತ್ರಗಳಾಗಿ ಕಾಣಬರುತ್ತವೆ. ವಿವಿಧ ವೃತ್ತಿಗಳಲ್ಲಿ ತೊಡಗಿಸಿಕೊಂಡ ವೈವಿಧ್ಯಮಯ ಪಾತ್ರಗಳನ್ನು ಕಾಣಬಹುದು. ನಿತ್ಯ ಸುಖವನ್ನು ಪಡೆಯುವುದು ಶಿವಾನುಭವದಿಂದ ಸಾಧ್ಯವಾಗುತ್ತದೆ ಎಂಬುದನ್ನು ಇಲ್ಲಿನ ಎಲ್ಲಾ ಪಾತ್ರಗಳೂ ಸಾರುತ್ತವೆ. 'ನುಡಿದಂತೆ ನಡೆದರೆ ಇದೇ ಜನ್ಮ ಕಡೆ' ಎಂಬುದನ್ನು ಘೋಷಿಸುತ್ತವೆ. ಪಾತ್ರಗಳೆಲ್ಲ 'ಭಕ್ತಿರಸ'ದಲ್ಲಿ ಮಿಂದು ಆತ್ಮೋದ್ಧಾರವನ್ನು ಪಡೆದುಕೊಂಡಂತಹವುಗಳು. ಶಿವನ ಸಾನಿಧ್ಯ ಸೇರುವುದೇ ಆ ಎಲ್ಲಾ ಪಾತ್ರಗಳ ಅಂತಿಮ ಗುರಿ. ಶಿವಸಾನ್ನಿಧ್ಯವೇ ಪರಮೋಚ್ಚ ಪದವಿ ಎಂಬುದನ್ನು ಹೇಳುತ್ತವೆ. ಆದರೆ ಈ ಪದವಿ ಎಲ್ಲರಿಗೂ ಸುಲಭದಲ್ಲಿ ಸಿಕ್ಕುವಂಥದಲ್ಲ. ಅದಕ್ಕೆ ಸಾಧನೆಬೇಕು, ನಿಷ್ಠೆಬೇಕು. ಆ ಸಾಧನೆ ಮರ್ತ್ಯದಲ್ಲೇ ನಡೆಯಬೇಕು. ಸಾಧನೆಯ ಹಾದಿ ಸುಲಭದ್ದಲ್ಲ, ದುರ್ಗಮವಾದದ್ದು. ಅಷ್ಟೇ ಅಲ್ಲ ಸರ್ವಸಮರ್ಪಣಾ ಮನೋಭಾವವಿರಬೇಕು. ಶಿವ ಒಡ್ಡುವ ನಾನಾ ತೆರನಾದ ಕಠಿಣ ಪರೀಕ್ಷೆಗಳನ್ನು ಎದುರಿಸುವ ಛಲವಿರಬೇಕು. ಶಿವ ಸಾನಿಧ್ಯ ಸೇರಲು ಎಂಥ ಕಷ್ಟ-ನಿಷ್ಠುರಗಳು ಎದುರಾದರೂ ಅವನ್ನೆಲ್ಲ ಅಂಜದೆ ಅಳುಕದೆ ಎದುರಿಸಬೇಕು ಎಂಬುದನ್ನು ಪಾತ್ರಗಳು ನಿರೂಪಿಸುತ್ತವೆ. ಇಲ್ಲಿಯ ಪಾತ್ರಗಳೆಲ್ಲವೂ ಈ ಭೂಮಿಯ ಮೇಲೆಯೇ ಹುಟ್ಟಿ ಸಾಧನೆ ಮಾಡಿ ಕೈಲಾಸ ಪದವಿಯನ್ನು ಪಡೆದುಕೊಂಡಂಥವು. ಇಹವನ್ನು ಕರ್ತಾರನ ಕಮ್ಮಟವನ್ನಾಗಿ ಮಾಡಿಕೊಂಡವು.

"ಹರಿಹರನ ರಗಳೆಗಳಲ್ಲಿ ಓಡಾಡುವ ಪಾತ್ರಗಳು ಕವಿಕಂಡ ಸೋಜಿಗವಲ್ಲ, ಲೋಕ ಕಂಡ ಸೃಷ್ಟಿ. ಅವರೆಲ್ಲರೂ ಮಾನವರಾಗಿ ಹುಟ್ಟಿದರು, ದೇವರಾಗಿ ಬೆಳೆದರು. ಅವರಲ್ಲಿ ಕೆಲವರು ಹುಟ್ಟುತ್ತಲೆ ಕಾರಣಿಕರಾದರೆ, ಇನ್ನೂ ಕೆಲವರು ಹುಟ್ಟಿ ಬೆಳೆದು ಕಾರಣಿಕರಾದರು. ಆದರೆ ಒಂದು ನಿಜ ಸಂಗತಿಯೆಂದರೆ ಅವರಲ್ಲಿ ಯಾರಿಗೂ ಕೈಕೊಂಡ ಕಾರ್ಯದಲ್ಲಿ ಸೋಲೆಂಬುದೇ ಇರಲಿಲ್ಲ. ಇದಕ್ಕೆ ಕಾರಣವೆಂದರೆ, ಅವರಲ್ಲಿ ಆಳವಾಗಿ ಬೇರೂರಿದ್ದ ಅಚಲವಾದ ನಿಷ್ಠೆ, ಮನದ ಮುಂದಣ ಸತ್ಯವನ್ನು ಕೊನೆಯವರೆಗೂ ಹಿಡಿದು ನಡೆಸಬೇಕೆಂಬ ಛಲ, ನಂಬಿದ ಧರ್ಮವನ್ನು ಅತ್ಯಂತ ವಿಶ್ವಾಸದಿಂದ ಪರಿಪಾಲಿಸುವ ಶ್ರದ್ಧೆ!"[೨೦]

ವಿಭಿನ್ನ ಸ್ವಭಾವದ ವಿಭಿನ್ನ ಸ್ಥಾನ-ಮಾನದ ವಿಭಿನ್ನ ವೃತ್ತಿಗಳಲ್ಲಿ ತೊಡಗಿದ ಪಾತ್ರಗಳನ್ನು ಎರಡೂ ಕಾವ್ಯಗಳಲ್ಲಿ ಕಾಣಬಹುದು. ಇಲ್ಲಿ ಮುಗ್ಧ ಭಕ್ತಿಯಿಂದ ಅಸಮಾನ್ಯ ಕಾರ್ಯದಲ್ಲಿ ತೊಡಗಿ ಕೃತಾರ್ಥರಾದ ರುದ್ರಪಶುಪತಿ ಇದ್ದಾರೆ. ಉಗ್ರನಿಷ್ಠಾವಂತರಾಗಿ ಎಲ್ಲರನ್ನೂ ಬೆರಗುಗೊಳಿಸಿ ಶಿವನನ್ನು ಮೆಚ್ಚಿಸಿದ ತಿರುನೀಲಕಂಠರಿದ್ದಾರೆ. ದೈವೀಶಕ್ತಿಯ ಪ್ರದರ್ಶನದ ಸ್ಪರ್ಧೆಯಲ್ಲಿ ಸಜೀವವಾಗಿ ವಿಮಾನದಲ್ಲಿ ಕೈಲಾಸಕ್ಕೆ ಹೋಗುವುದರ ಜೊತೆಗೆ ತಮ್ಮೊಂದಿಗೆ ಕುಟುಂಬವನ್ನೂ ಕರೆದುಕೊಂಡು ಹೋದ ಅಮರನೀತಿಯಂತಹ ಸಾಹಸಿಗಳಿದ್ದಾರೆ. ತಮ್ಮ ತಮ್ಮ ಜೀವನೋಪಾಯದ ವೃತ್ತಿಗಳನ್ನೇ ಪರಮಾತ್ಮನ ಸಾಕ್ಷಾತ್ಕಾರದ ಸಾಧನಗಳನ್ನಾಗಿ ಮಾಡಿಕೊಂಡ ಒಕ್ಕಲುಮಗ ಇಳೆಯಾಂಡಗುಡಿಮಾರ, ಆಕಳ ಕಾಯುವ ಆನಾಯನಾರ, ಬೇಡರವನಾದ ಕಣ್ಣಪ್ಪ, ಭತ್ತಕೊಯ್ಯುವ ಅರಿವಾಳ್ತಾಂಡ, ಬಟ್ಟೆ

೨೦. ಹಿರೇಮಲ್ಲೂರ ಈಶ್ವರನ್, ಹರಿಹರನ ಕೃತಿಗಳು, ಪುಟ ೫೦೦.

ಹಸನುಮಾಡುವ ತಿರುಕುರುಂಪೆತೊಂಡರಂಥವರಿದ್ದಾರೆ. ಮತ್ತು ಗುಪ್ತಭಕ್ತರಾದ ಕಾರಿಕಾಲಮ್ಮೆಯರಂತಹವರಿದ್ದಾರೆ. ಈ ಪಾತ್ರಗಳೆಲ್ಲ ತಮ್ಮ ತಮ್ಮ ವೈಯಕ್ತಿಕ ಶಕ್ತಿ ಸಾಮರ್ಥ್ಯ ಮತ್ತು ಸತ್ವಗಳಿಂದ ಗುರಿಮುಟ್ಟಿದವುಗಳು.

" ಹರಿಹರ ಶಿವನ ಕೃಪೆಯನ್ನು ಸಂಪಾದಿಸುವುದು ಬದುಕಿನ ಗುರಿ ಎಂಬ ನಂಬಿಕೆಯಲ್ಲಿ ಬದುಕಿದವನು. ಪ್ರಭುಶಕ್ತಿಯ ಆಶ್ರಯದಿಂದ ದೊರೆಯಬಹುದಾದ ಸುಖ, ಸಂಪತ್ತು, ಕೀರ್ತಿ, ಗೌರವ ಇತ್ಯಾದಿ ಆಮಿಷಗಳನ್ನು ಅತ್ಯಂತ ನಿಕೃಷ್ಟವಾಗಿ ಕಂಡು, ತನ್ನ ವ್ಯಕ್ತಿತ್ವವನ್ನು ಆ ಪರಾತ್ಪರನಾದ ಶಿವನ ಸೇವೆಗೆ ಸಮರ್ಪಿಸಿಕೊಂಡವನು. ಹರಿಹರನ ಈ ನಿಲುವು ಶಿವಪರವಾಗಿದ್ದರೂ ಜೀವನ ವಿರೋಧಿಯಾಗಿಲ್ಲ ಎನ್ನುವುದು. ಭಕ್ತ ಕವಿಯಾದ ಹರಿಹರ, ಪರಮ ವೈರಾಗ್ಯವನ್ನೆ ತಾತ್ವಿಕವಾಗಿ ಎತ್ತಿ ಹಿಡಿದು, ಈ ಲೋಕದ ಭೋಗ, ಐಶ್ವರ್ಯ ಇತ್ಯಾದಿಗಳು ಅಲ್ಪವೆಂಬ ಅರಿವನ್ನು ಬೆಳೆಯಿಸಿಕೊಂಡರೂ ಆ ಕಾರಣಕ್ಕಾಗಿ, ಇಹದ ಬದುಕು ತುಚ್ಛವೆಂದಾಗಲಿ, ಸಂಪೂರ್ಣ ನಿರಾಕರಣೆಗಷ್ಟೆ ಅರ್ಹವಾದದ್ದೆಂದಾಗಲಿ ರಭಸದಿಂದ ಹೇಳುವ ಸ್ವಭಾವದವನಲ್ಲ. ಈ ಬದುಕು ಒಂದು ಸಾಧನಾರಂಗ; ಶಿವಾರ್ಚನೆಗೆ ಒಂದು ವೇದಿಕೆ. ಶಿವಕೃಪೆಯ ಸಂಪಾದನೆಗೆ ಒಂದು ಮಾರ್ಗ ಎಂಬುದನ್ನು ಮರೆಯಲಿಲ್ಲ".[೨೨]

ಇಲ್ಲಿನ ಪಾತ್ರಗಳೆಲ್ಲ ಶಿವನಾಡಿಸುವ 'ಸೂತ್ರದಬೊಂಬೆ'ಗಳಂತೆ ಒಂದೇ ವಿಧಾನದಲ್ಲಿ ನಡೆದುಕೊಳ್ಳುತ್ತವೆ. ತನ್ನ ಭಕ್ತರ ಭಕ್ತಿ ಪ್ರದರ್ಶನಕ್ಕೆ ಶಿವನೇ ಒಂದ ಸಂದರ್ಭವನ್ನು ಸೃಷ್ಟಿಸಿ ಅದು ಪ್ರಕಟಗೊಂಡಾಗ ನೋಡಿ ಸಂತೋಷಪಟ್ಟು, ಭಕ್ತರ ಗುಣಗಾನಮಾಡಿ ಅವರಿಗೆ ಗಣಪದವಿಯನ್ನು ನೀಡುತ್ತಾನೆ.

" ಮರ್ತ್ಯದ ಮಹತ್ವವನ್ನು ಹರಿಹರನ ರಗಳೆಯ ಎಲ್ಲಾ ಕಥಾನಾಯಕರೂ ಒಪ್ಪಿಕೊಳ್ಳುತ್ತಾರೆ. ಹಾಗೆ ನೋಡಿದರೆ ಹರಿಹರನ ರಗಳೆಗಳ ಮುಖ್ಯ ಪಾತ್ರಗಳೆಲ್ಲಾ ಸಂಸಾರಿಗಳೇ, ಗೃಹಸ್ಥರೇ. ಅವರು ಯಾರೂ ಶಿವಭಕ್ತಿಯ ಹೆಸರಿನಲ್ಲಿ ಹೆಣ್ಣನ್ನಾಗಲಿ, ಹೊನ್ನನ್ನಾಗಲೀ ಕಡೆಗಣಿಸಿ ನಡೆದವರೆಲ್ಲ. ಹಾಗೆಂದು ಅವುಗಳಲ್ಲೆ ನಿಮಗ್ನರಾದವರೂ ಅಲ್ಲ. ಈ ಲೋಕದ ರೂಪ, ರಂಗು, ಅದು ತರುವ ಸುಖ ಇದೆಲ್ಲವನ್ನೂ ತಿರಸ್ಕರಣೀಯವೆಂದು, ನಿಕೃಷ್ಟವಾಗಿ ನೋಡುವ ರಭಸ ಇಲ್ಲಿಲ್ಲ. ಇವರಾರೂ ಪರದ ಹೆಸರಿನಲ್ಲಿ ಇಹವನ್ನು ನಿರಾಕರಿ ಸುವುದಿಲ್ಲ."[೨೩]

ಎರಡೂ ಕಾವ್ಯಗಳ ಪಾತ್ರಗಳ ಗಮನ ಗುರಿಯೆಲ್ಲ ಶರಣರ ಕಡೆಗೆ. ಶಿವನ ಕಡೆಗೆ. ಪಾತ್ರಗಳೆಲ್ಲ ಶಿವನ ಕಡೆಗೇ ನೋಟವನ್ನು ನೆಟ್ಟಿರುತ್ತವೆ. ತಮ್ಮ ಸೇವೆ ಶಿವಶರಣರಿಗಾಗಿ ಎಂದು ಮೀಸಲಿಟ್ಟವರು. ಯಾವ ಹೊತ್ತಿನಲ್ಲಾಗಲೀ, ಎಂತಹ ಸಂದರ್ಭದಲ್ಲೇ ಆಗಲಿ, ಯಾವ ಭಕ್ತ ಬಂದು ಕೇಳಿದರೂ ಅವರು ಇಲ್ಲ ಎನ್ನುವವರಲ್ಲ.

---

೨೨. ಜಿ. ಎಸ್. ಶಿವರುದ್ರಪ್ಪ, ಸಾಧನೆ, ಸಂಪುಟ -೬, ಸಂಚಿಕೆ -೪ ಪುಟ ೨

೨೩. ಅದೇ, ಪುಟ-೫

ತಿರುನೀಲಕಂಠರ ರಗಳೆಯಲ್ಲಿ ದಂಪತಿಗಳು ಶಿವನ ಮೇಲಿಟ್ಟ ಆಣೆಯ ವ್ರತವನ್ನು ಪರಿಪಾಲಿಸಲು ಅವರು ಪಟ್ಟ ಪಾಡು, ಅನುಭವಿಸಿದ ಅವಮಾನಗಳು, ದಂಪತಿಗಳ ತ್ಯಾಗ, ಸಂಯಮ, ಅವರ ಉಗ್ರನಿಷ್ಠೆ ಗಮನ ಸೆಳೆಯುತ್ತವೆ. ತಿರುನೀಲಕಂಠ ಚೋಳದೇಶದ ಪೊನ್ನಾಂಬಲನಾಥನ ಪರಮಭಕ್ತ. ನಂಬಿಯ ಹಠ ಒಂದು ಬಗೆಯಾದರೆ, ಈತನದು ಮತ್ತೊಂದು ಬಗೆ. ಆಕಸ್ಮಿಕವಾಗಿ ವೇಶ್ಯೆಯೊಬ್ಬಳ ಉಪಚಾರ ಸ್ವೀಕರಿಸಿ, ಅದರಿಂದ ಹೆಂಡತಿಯ ತಪ್ಪು ಕಲ್ಪನೆಗೆ ಗುರಿಯಾಗಿ, ಅವಳೊಡನೆ ದೇಹಸಂಬಂಧವನ್ನೇ ತೊರೆಯುವ ಹಠ ಇಲ್ಲಿದೆ.ಪೆರಿಯಪುರಾಣದಲ್ಲಿ ತಿರುನೀಲಕಂಠರಿಗೆ ವೇಶ್ಯೆಯರ ಸಹವಾಸವಿತ್ತೆಂಬ ಸೂಚನೆ ದೊರೆಯುತ್ತದೆ. ಹರಿಹರ ತಿರುನೀಲಕಂಠರ ಚಾರಿತ್ರ್ಯ ಕೆಡದಂತೆ ಆ ಪಾತ್ರವನಿಲ್ಲಿ ಉದಾತ್ತೀಕರಿಸಿದ್ದಾನೆ. ಪೆರಿಯಪುರಾಣದಲ್ಲಿ ಮಗನ ಪಾತ್ರದ ಪ್ರಸ್ತಾಪವಿದೆ. ರಗಳೆಯಲ್ಲಿ ಇಲ್ಲ ಶಿವನಾಣೆ ಇಟ್ಟು ಆ ಮೂಲಕ ದಂಪತಿಗಳು ಕಳೆದುಕೊಂಡ ಸೌಖ್ಯನಷ್ಟವನ್ನು, ಶಿವನೇ ವೇಷಧಾರಿಯಾಗಿ ಬಂದು, ಹುಸಿ ಜಗಳ ಹೂಡಿ ಪರಿಹರಿ ಸುವ ಬಗೆಯನ್ನು ಈ ರಗಳೆಯಲ್ಲಿ ಕಾಣಬಹುದು. ಶಿವ ವೃದ್ಧವೇಷಧಾರಿಯಾಗಿ ಬಂದು ದಂಪತಿಗಳ ಬಳಿ ಒಂದು ಪಾತ್ರೆಯನ್ನಿಟ್ಟು ಅದು ಮಾಯವಾಗುವಂತೆ ಮಾಡಿ, ಪಾತ್ರೆ ಬೇಕೆಂದು ಜಗಳ ಹೂಡಿ, ಅವರು ಕೈಹಿಡಿದು ಪ್ರಮಾಣ ಮಾಡಬೇಕೆಂದು ಹಠಮಾಡಿ, ಅವರನ್ನು ಕೊಂಡದಲ್ಲಿ ಮುಳುಗುವಂತೆ ಮಾಡಿ ಮೇಲೇಳುವಾಗ, ಹದಿನಾರರ ಹರೆಯದವರಾಗುವಂತೆ ಮಾಡಿ ಅವರನ್ನು ಮತ್ತೆ ಒಂದುಗೂಡಿಸುತ್ತಾನೆ.

ವಿನೋದ, ವ್ಯಂಗ್ಯ, ನಾಟಕೀಯತೆಯ ಅಂಶಗಳನ್ನೆಲ್ಲ ಈ ರಗಳೆಯಲ್ಲಿ ಕಾಣಬಹುದು.

ಸತಿ-ಪತಿಗಳಿಬ್ಬರೂ ಒಂದೇ ಮನೆಯಲ್ಲಿ ಸುದೀರ್ಘ ಎಂಬತ್ತು ವರ್ಷಗಳ ಕಾಲ ಬಾಳಿ ಒಬ್ಬರನ್ನೊಬ್ಬರು ಮುಟ್ಟದಂತೆ 'ಶಿವನಾಣೆ'ಯನ್ನು ಅನವರತ ಪಾಲಿಸಿದ ಅಪೂರ್ವಚೋದ್ಯ ಈ ಕಥೆಯಲ್ಲಿದೆ. ಅನುಪಮವಾದ ತ್ಯಾಗಸಂಯಮ ಮೂರ್ತಿ ಈ ದಂಪತಿಗಳು.

"ತಿರುನೀಲಕಂಠರ ರಗಳೆಯಲ್ಲಿ ತೊಂಬತ್ತೈದು ವರ್ಷಗಳವರೆಗೆ ಸತಿಪತಿಯರು ಪರಸ್ಪರ 'ಮುಟ್ಟಿದರೆ ಶಿವನಾಣೆ' ಎಂಬುದನ್ನು ಅಖಂಡವಾಗಿ ಕಾಯ್ದುಕೊಂಡು ಬಂದು, ಮುಪ್ಪಿನ ಮುದುಕರಾದಾಗ, ಶಿವ ಅವರನ್ನು ಪರೀಕ್ಷೆಗೆ ಒಡ್ಡಿ ಅವರ ಮಹತ್ವವನ್ನು ಲೋಕಕ್ಕೆ ಪ್ರಕಟಿಸುತ್ತಾನೆ. ಆದರೆ ಈ ಸಂದರ್ಭದಲ್ಲಿ, ಉಳಿದ ಅನೇಕ ಶರಣರ ವಿಚಾರದಲ್ಲಿ ನಡೆದುಕೊಂಡಂತೆ ಅವರನ್ನೂ ವಿಮಾನವೇರಿಸಿ ಕೈಲಾಸಕ್ಕೆ ಕರೆದುಕೊಂಡು ಹೋಗಬಹುದಾಗಿತ್ತು; ಆದರೆ ಶಿವ ಹಾಗೆ ಮಾಡಲಿಲ್ಲ. ಯೌವನದಿಂದ ಮೊದಲುಗೊಂಡು ಅನೇಕ ವರ್ಷಗಳವರೆಗೆ ಅನುಭವಿಸಬಹುದಾಗಿದ್ದ ದಾಂಪತ್ಯ ಸುಖವನ್ನೆ ಬಿಟ್ಟುಕೊಟ್ಟು ಒಬ್ಬರನ್ನೊಬ್ಬರು

ಮುಟ್ಟದಂತೆ 'ಆಣೆ'ಗಾಗಿ ಬದುಕಿದ ಈ ದಂಪತಿಗಳ ಮೇಲಿನ ಕನಿಕರದಿಂದ, ಶಿವ ಅವರಿಗೆ ನವಯೌವನವನ್ನು ಕರುಣಿಸಿ, 'ಇನ್ನಷ್ಟು ವರ್ಷ ಈ ಭೂಮಿಯ ಮೇಲೆ ಸುಖವಾಗಿ ಇದ್ದು ಅನಂತರ ನಮ್ಮಲ್ಲಿಗೆ ಬನ್ನಿ' ಎನ್ನುತ್ತಾನೆ. ಇಲ್ಲಿ ಕಾಣುವ ಶಿವನ ನಿಲುವು ಗಮನಿಸಬೇಕಾದದ್ದು. ಅಲ್ಲದೆ ಈ ಮರ್ತ್ಯ ಭೋಗದ ವಿಚಾರದಲ್ಲಿ ಹರಿಹರನು ತಾಳಿದ ನಿಲುವು ಇದು ಎಂಬುದನ್ನು ಗುರುತಿಸಿಕೊಳ್ಳಬೇಕಾಗಿದೆ. ಭಕ್ತಿ ವೈರಾಗ್ಯಗಳ ಹೆಸರಿನಲ್ಲಿ, ಈ ಲೋಕದ ಭೋಗ ವೈಭವಗಳನ್ನು ಉದ್ದೇಶಪೂರ್ವಕವಾಗಿ ಕೀಳ್ಗಳೆದು ನೋಡುವ ಜೀವನವಿರೋಧಿಯಾದ ನಿಲುವನ್ನು ಹರಿಹರನು ಎತ್ತಿಹಿಡಿಯಲಿಲ್ಲ. ಅದರ ಬದಲು ಇಹದ ಬದುಕಿನಲ್ಲೆ ಜೀವ ಪಕ್ವವಾಗುತ್ತ ಲೋಕದ ಭೋಗವನ್ನು ಯೋಗವನ್ನಾಗಿ ಪರಿವರ್ತಿಸುವುದು ಸಾಧ್ಯ ಎಂಬ ದರ್ಶನವನ್ನು ಪ್ರಕಟಿಸಿದ್ದಾನೆ."[೨೪] ಇದೇ ಬಗೆಯ ದರ್ಶನವನ್ನು ಶೇಕ್ಕಿಲಾರ ನಲ್ಲೂ ಕಾಣಬಹುದು.

ಶಿವಭಕ್ತರು ಪರಾವಲಂಬಿ ಜೀವನ ನಡೆಸುವಂತಹವರಲ್ಲ. ಒಂದಲ್ಲ ಒಂದು ದುಡಿಮೆಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡವರು. ಶರಣರ ಧ್ಯೇಯ ಧೋರಣೆಯನ್ನು ತಮ್ಮ ಬದುಕಿನಲ್ಲಿ ಅಳವಡಿಸಿಕೊಂಡಿರುವುದನ್ನು ಕಾಣಬಹುದು. ಕೈಗೊಂಡ ಉದ್ಯೋಗವನ್ನೇ ದೈವ ಸಾಕ್ಷಾತ್ಕಾರಕ್ಕೆ ಸಾಧನೆಯನ್ನಾಗಿ ಬಳಸಿಕೊಳ್ಳಬಹುದೆಂಬ ತತ್ವವನ್ನು ಇಳೆಯಾಂಡಗುಡಿಮಾರ ಬಟ್ಟೆ ಹೊಗೆಯುವ ತಿರುಕುರುಂಪೆತೊಂಡರ ಕಥೆಗಳಲ್ಲಿ ಕಾಣಬಹುದು.

ಕಾಯಕವು ಇಹ-ಪರಗಳನ್ನು ಬೆಸೆಯುತ್ತದೆ. ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವಂತೆ ಮಾಡುತ್ತದೆ. ವ್ಯಕ್ತಿಯ ಆತ್ಮೋನ್ನತಿಗೆ ಮಾರ್ಗದಲ್ಲಿ ಸಹಾಯಕವಾಗಿ ನಿಲ್ಲುವುದು. ವೃತ್ತಿಯು ಆಧ್ಯಾತ್ಮಸಾಧನವಾಗಿ ಹೇಗೆ ಪರಿಣಮಿಸುತ್ತದೆಂಬುದನ್ನು ಇಬ್ಬರೂ ಕವಿಗಳು ಸಮರ್ಥವಾಗಿ, ಸ್ಪಷ್ಟವಾಗಿ ಚಿತ್ರಿಸಿದ್ದಾನೆ.

'ಇಳೆಯಾಂಡಗುಡಿಮಾರ'ನೆಂಬ ಶಿವಭಕ್ತ ಒಕ್ಕಲುತನದ ಉದ್ಯೋಗ ಕೈಕೊಂಡಿದ್ದ. ಆ ಉದ್ಯೋಗದಲ್ಲಿ ತೊಡಗುತ್ತಲೇ ಆತ ಶಿವನನ್ನು ಭಕ್ತಿಯಿಂದ ಭಜಿಸುತ್ತಿದ್ದ. ಸದಾ ಶರಣರಿಚ್ಛೆಯನ್ನು ಸಲ್ಲಿಸಬೇಕೆಂದು .-

ಸಮಚಿತ್ತವೆಂಬ ಭೂಮಿಯನೆ ಹಸನಾಗಿರಿಸಿ
ಅಮರ್ದ ಶಂಕರನ ನೆನಹೆಂಬ ನೇಗಿಲನಿರಿಸಿ
ಅರಿವರ್ಗವಾರುವಂ ಹೂಡುವೆತ್ತಂ ಮಾಡಿ
ಹರಿವ ಮನಮಂ ಕಟ್ಟಿ ಹಿಡಿವ ಹಗ್ಗಂ ಮಾಡಿ
ಗರ್ವಿಸುವಹಂಕಾರಮುಮನಚ್ಚುವಂ ಮಾಡಿ
ಸರ್ವೇಶನಿಷ್ಠೆಯಿಂ ತಳಿವ ಬೀಜಂ ಮಾಡಿ
ಸುರುಚಿರ ಶಿವಜ್ಞಾನ ಶಶಿಕರಂ ಸೋಂಕುತಿರೆ
ಹರನ ಪರಮಾನಂದರಸದ ಮಳೆ ಕೊಳುತಮಿರೆ

೨೪. ಅಡಿಟಿಪ್ಪಣಿ ೨೨ ರಂತೆ, ಪುಟ-೬.

ಬಿತ್ತಿ ಬೆಳೆವಂ ಶಿವನ ಸದ್ಭಕ್ತಿ ಸಸಿಗಳಂ
ಕಿತ್ತು ಕಳೆವಂ ಮೊಳೆವ ಪಾಪಾದಿ ಕಳೆಗಳಂ
ಇಂತು ತನ್ನೊಳಗೆ ಭಕ್ತ್ಯಾರಂಬವಂ ಮಾಳ್ಪ
ಅಂತೆಲ್ಲರಱಿಯೆ ಹೊಱಗಾರಂಬವಂ ಮಾಳ್ಪ" (ಪುಟ ೧೭, ಸಾಲು ೯-೧೦)

ಹೀಗೆ ಇಳೆಯಾಂಡ ಗುಡಿಮಾರರು ಅಂತರಂಗ ಬಹಿರಂಗಗಳ ಉಳುಮೆ ಮಾಡುವರು. ಈ ಉಳುಮೆಯ ಫಲ ಅತಿಭಕ್ತಿಸಸಿಯ ಬೆಳೆ!

ಗುಡಿಮಾರನ ತ್ಯಾಗ ಬಾಹ್ಯ ಸಂಪತ್ತುಗಳಿಗೆ ಮಾತ್ರವೇ ಸೀಮಿತವಾಗಿರಲಿಲ್ಲ. ಆತನ ದಾನಗುಣ ಪರಾಕಾಷ್ಠತೆಯ ಸ್ಥಿತಿಯನ್ನು ಮುಟ್ಟಿದ್ದು ತನ್ನ ಅಂತರಂಗವನ್ನು ದಾನ ಮಾಡಲು ಹೊರಟಿದ್ದರಿಂದ.

ಧನವಿಲ್ಲದಡೆಯೇನು ಧ್ಯಾನವಿಲ್ಲದಡೇನು
ಮನೆಯಿಲ್ಲದಡೆಯೇನು ಏನುವಿಲ್ಲದಡೇನು
ತನುವಿರ್ದಪುದು ತನುವಿನೊಳಗರ್ಥವಿತ್ತಪೆಂ
ಮನಮಿರ್ದಪುದು ಮನದೊಳರ್ಥಮಂ ಕೊಟ್ಟಪೆಂ
ಎರಡು ಕಣ್ಣಿವೆಚಿಮೆರಡರೊಳಗೊಂದನಿತ್ತಪೆಂ
ಹರಣಮಿದೆ ಹರಣದೊಳಗರ್ಥಮುಮನಿತ್ತಪೆಂ
(ಪುಟ ೧೮, ಸಾಲು ೬೭-೭೧)

ಹೀಗೆ ಶರಣರಿಗೆ ದಾನಮಾಡಬೇಕೆಂಬ ಇಚ್ಛೆ ನಿಮಿಷ ನಿಮಿಷಕ್ಕೂ ಹೆಚ್ಚುತ್ತಿತ್ತು. ಸರ್ವಸಮರ್ಪಣಾ ಭಾವ ಕ್ಷಣ ಕ್ಷಣಕ್ಕೂ ಆತನನ್ನು ಆವರಿಸುತ್ತಿತ್ತು. ಮನೆಗೆ ಬಂದ ಶರಣರ ಸಂತೃಪ್ತಿಗಾಗಿ ಅವರ ಚಳಿಯನ್ನು ನೀಗಿಸಲೆಂದು ಮನೆಯ ಮಾಳಿಗೆಯ ಜಂತಿಯನ್ನೇ ಕಡಿದು ಬೆಂಕಿಮಾಡುತ್ತಾನೆ. ಅಬ್ಬರಿಸುವ ಮಳೆಯಲ್ಲಿ, ಕಗ್ಗತ್ತಲಿನ ವೇಳೆಯಲ್ಲಿ 'ಚಳಿ ಘನವಾದರೂ, ಮತ್ತೆ ಕತ್ತಲೆ ಮುತ್ತಿ ಉನ್ನತವಾಗಿ' ದಾರಿ ಕಾಣದಾದರೂ, ಅತಿ ಪ್ರಯಾಸದಿಂದ ಹೊಲಕ್ಕೆ ಹೋಗಿ ಮೊಳಕೆಯೊಡೆದ ಭತ್ತವನ್ನು ಆಯ್ದು ಮನೆಗೆ ತಂದು ಜಂಗಮ ವೇಷಧಾರಿ ಶಿವನಿಗೆ ಅಂಬಲಿ ಮಾಡಿ ಬಡಿಸುತ್ತಾನೆ. ಇಷ್ಟೇ ಆಗಿದ್ದರೆ ಪರವಾಗಿಲ್ಲ, ಊಟಕ್ಕೆ ಬಾಳೆಲೆಯನ್ನು ತರಲು ಹೋದ ತಮ್ಮ ಮಗ, ಹಾವು ಕಚ್ಚಿ ಮರಣಕ್ಕೀಡಾದನು. ಅದು ತಿಳಿದೂ, ತಮ್ಮ ಅಳಲನ್ನು ಇನಿತೂ ತೋರಗೊಡದ ಈ ಅನುಪಮ ಭಕ್ತ ಶಿರೋಮಣಿಗಳು ಶತವೃದ್ಧನಿಗೆ ಊಟ ಬಡಿಸಿ ತಮ್ಮ ಭಕ್ತಿ ನಿಷ್ಠೆಯನ್ನು ಮೆರೆದರು. ಸತಿಪತಿಗಳೊಂದಾದ ಭಕ್ತಿ ಇವರದು. ಎಂತಹ ಎಡರುತೊಡರುಗಳು ಎದುರಾದರೂ ಎದೆಗುಂದದೆ, ಕೈಗೊಂಡ ವ್ರತವನ್ನು ಪಾಲಿಸುವ ಉತ್ಕಟ ಶ್ರದ್ಧೆ ಈ ದಂಪತಿಗಳದು. ಇವರ ಭಕ್ತಿ, ನಿಷ್ಠೆ, ಶ್ರದ್ಧೆ ಸಾಮಾನ್ಯವಾದುದಲ್ಲ.

ಮಗನ ಸಾವಿನ ಸಂಕಟದ ಸಮಯದಲ್ಲೂ ದುಃಖವನ್ನು ತೋರಗೊಡದೆ ಅತಿಥಿ ಸತ್ಕಾರ ಮಾಡಿದ ದಂಪತಿಗಳ ತ್ಯಾಗ ಕಷ್ಟಸಹಿಷ್ಣುತೆಗಳ ಅನುಪಮವಾದದ್ದು. ಈ ಪ್ರಸಂಗವನ್ನು ಕವಿ ಅತ್ಯಂತ ಹೃದಯ ಸ್ಪರ್ಶಿಯಾಗಿ ಚಿತ್ರಿಸಿದ್ದಾನೆ.

ಪೆರಿಯಪುರಾಣದ ಕಥೆಯಲ್ಲಿ ಮಗನ ಪಾತ್ರದ ಪ್ರಸ್ತಾಪವಿಲ್ಲ. ಗುಡಿಮಾರರ ಭಕ್ತಿಯ ಪರಾಕಾಷ್ಠತೆಯನ್ನು ಚಿತ್ರಿಸಿಲು ಮಗನ ಪಾತ್ರ ಅಗತ್ಯವೆಂದು ಹರಿಹರನು ಕಂಡುಬಂದುದರಿಂದ ಈ ಬದಲಾವಣೆ ಮಾಡಿಕೊಂಡಿದ್ದಾನೆ. ಹರಿಹರನ ಸ್ವಂತಿಕೆಯನ್ನು ಇಲ್ಲಿ ಕಾಣಬಹುದು.

"ಹೊಲವನ್ನು ಹಸನುಗೊಳಿಸಿ ಬೆಳೆಯನ್ನು ಪಡೆಯುವ ಕ್ರಮದಲ್ಲಿ ದೇಹ, ಮನಗಳ ಶುದ್ಧೀಕರಣವನ್ನು ಸ್ವಾರಸ್ಯಕರವಾದ ರೀತಿಯಲ್ಲಿ ಹೊಂದಿಸಿ ಪರಮಾನಂದದ ಬೆಳೆಯಲ್ಲಿ ಕೊನೆಗೊಳ್ಳುವ ಇಲ್ಲಿ ರೂಪಕವು ಸ್ವಾರಸ್ಯಕರವೂ ಅರ್ಥಪೂರ್ಣವೂ ಆಗಿದೆ. ಭಕ್ತಿಯ ಉತ್ಕಟ ಭಾವದಲ್ಲಿ ತನ್ನ ಸ್ವಂತ ಅನುಕೂಲತೆಗಳನ್ನೆಲ್ಲ ಬಲಿದಾನ ಮಾಡುವಾಗ ತೋರಿದ ಮನದ ಪ್ರಸನ್ನತಾಭಾವವು ಇಲ್ಲಿಯ ಮುಖ್ಯ ದೃಷ್ಟಿಯಾಗಿದೆ. 'ಎನಿತೆನಿತು ಭೂಮಿ ಕ್ರಮದಿಂ ಮಾಱೆ ಕಿರಿದಾಗೆ, ಅನಿತನಿತು ಗುಡಿಮಾರನ ಮನ ಹೆಚ್ಚಿ ಪಿರಿದಾಯಿತಂತೆ'. ಬಾಳಿನಲ್ಲಿ ದ್ರವ್ಯ ಸಂಗ್ರಹವು ಕಿರಿದಾಗುವ ಕ್ರಮದಲ್ಲಿ ಮನದ ಹಿರಿಮೆ ಹೆಚ್ಚುವುದೆಂಬ ಮಾತನ್ನು ಇಲ್ಲಿ ನಿರೂಪಿಸಲಾಗಿದೆ. ತನ್ನ ಹಾಗೂ ತನ್ನ ಕುಟುಂಬದವರ ಸ್ಥಿತಿ ಅತ್ಯಂತ ನಿಕೃಷ್ಟವಾದಾಗಲೂ ಪ್ರಸನ್ನತಾಭಾವದಿಂದ ಇನ್ನೂ ಹೆಚ್ಚಿನ ತ್ಯಾಗಕ್ಕೆ ಸಿದ್ಧನಾದ ಇಳೆಯಾಂಡಗುಡಿಮಾರನು, ದೈವೀಪ್ರಸನ್ನತೆಯನ್ನು ಪಡೆದನೆಂಬ ದೃಷ್ಟಿಯನ್ನು ಹರಿಹರನು ಇಲ್ಲಿ ಸ್ಪಷ್ಟಗೊಳಿಸಿದ್ದಾನೆ. ಬಿತ್ತಿದ ಬೀಜವನ್ನೇ ಎತ್ತಿ ಶರಣರ ಆಹಾರಕ್ಕೆಂದು ಒದಗಿಸುವಲ್ಲಿ ಮನದಾಶೆಯನ್ನು ಕಿತ್ತು ಭವದ ಬಿತ್ತನ್ನೇ ಹುರಿದುಹಾಕುವ ಹಾದಿಯನ್ನು ತೋರಿಸಲಾಗಿದೆ." [೨೫]

ಕಂಡೆನಿಲ್ಲಿಂತಪ್ಪ ನೇಹಮಂ ಪೊಸತಯ್ಯ
ಈ ಮಳೆಯೊಳೀ ಚಳಿಯೊಳಿಂತು ಹೋದವರುಂಟೆ
ಏ ಮಾತೊ ಮೊಳೆವಿತ್ತನೆತ್ತಿ ತಂದವರುಂಟೆ
ಮಗನ ಸಾವಂ ನೋಡದುಣಲಿಕ್ಕಿದವರುಂಟೆ
ಜಗದೊಳಗೆ ನಿರ್ದಂಭರೆನಿಪರೇನಿಂತುಂಟೆ" (ಪುಟ ೧೦, ಸಾಲು ೨೦೪-೨೦೮)

ಎಂದು ಶಿವನಿಂದಲೇ ಮನದುಂಬಿ ಹೊಗಳಿಸಿಕೊಂಡ ಮಹಾನುಭಾವ ಇಳೆಯಾಂಡಗುಡಿಮಾರ.

ಕಾಂಚೀಪುರದಲ್ಲಿ ಬಟ್ಟೆಗಳನ್ನು ಮಡಿಮಾಡುವ ಕಾಯಕದಲ್ಲಿ ನಿರತನಾಗಿದ್ದ ಶಿವಭಕ್ತ ತಿರುಕುರುಂಪೆತೊಂಡ. ಈತನಿಗೆ ಶಿವನಲ್ಲಿ ಅಗಾಧವಾದ ಶ್ರದ್ಧೆ. ಈತ ಏನಾಗಿದ್ದನೆಂಬುದು ಶಿವನೊಬ್ಬನಿಗೆ ಗೊತ್ತಿದ್ದಿತು. ಬೇರಾರಿಗೂ ಅದು ತಿಳಿಯದು. ಹೊತ್ತಿಗೆ ಮುಂಚೆ ಎದ್ದು ಶಿವಮಂದಿರಕ್ಕೆ ಹೋಗಿ, ಶಿವನಿಗೆ ಭಕ್ತಿ ಪೂಜೆ ಪ್ರಾರ್ಥನೆಗಳನ್ನು ಸಲ್ಲಿಸಿದ ಮೇಲೆಯೇ ಈತನು ತನ್ನ ಕಾಯಕವನ್ನು ಕೈಗೊಳ್ಳುವನೆಂಬುದು ಎಲ್ಲರಿಗೂ ತಿಳಿದಿತ್ತು. ಆದರೆ ಆತನ ಕಾಯಕದ ಒಳಮರ್ಮ ಶಿವನಿಗೆ ಮಾತ್ರ ತಿಳಿದಿದ್ದಿತು. ಈತನು ತನ್ನ ವೃತ್ತಿಯನ್ನು ಶಿವಾನುಭವಕ್ಕೆ ತಿರುಗಿಸಿಕೊಂಡು ಕೈಲಾಸವನ್ನು ಕಂಡ. ರೂಪಕದ ಮೂಲಕ ಕವಿ ಹರಿಹರ ಈ ಮಾತನ್ನು ಸ್ವಾರಸ್ಯಕರವಾಗಿ ಹೇಳಿದ್ದಾನೆ.

ಪಾಪವೆಂಬ ಮಲಿನಮನದ ಸೀರೆಯಂ ತೆರಳ್ಚಿಕಟ್ಟಿ
ಕೋಪವೆಂಬ ಕತ್ತೆ ನಿಲಲು ಬೆನ್ನಮೇಲೆ ಮಾಣದೊಟ್ಟಿ

---

೨೫. ಸ.ಸ. ಮಾಳವಾಡ, ಹರಿಹರನ ರಗಳೆಗಳಲ್ಲಿ ಜೀವನ ದರ್ಶನ. ಪುಟ-೫೫.

ನಡೆದು ಭವನ ಭಕ್ತಿರಸದ ಹೊಳೆಯ ತಡಿಯ ಬಳಿಗೆ ಬಂದು
ಮೃಡನೆ ಶರಣೆನುತ್ತೆ ಧೈರ್ಯವೆಂಬ ಕಲ್ಲ ಬಳಿಗೆ ಬಂದು
ತಾಪದತ್ರಯಂಗಳಿಂದವಂದು ಕುದಿಸಿ ಕುದಿವುತಿರಲು
ತಾಪವಾಹಿ ವಸ್ತ್ರಕುಲಮನಲ್ಲಿ ಪಿಡಿದು ತೊಳೆವುತಿರಲು
ಒಗೆದನೊಗೆದನಮಮ ಹರನ ಪರಮಭಕ್ತಿರಸದೊಳೊಗೆದ
(ಪುಟ ೫೯, ಸಾಲು ೨೩-೨೮)

ತನ್ನ ಉದ್ಯೋಗವನ್ನೇ ಆಧ್ಯಾತ್ಮಕ್ಕೆ ಅಳವಡಿಸಿಕೊಂಡು ಇಹಪರಗಳೆರಡಕ್ಕೂ ಮಾನ್ಯನಾದ ಶರಣನೀತ.

ತಿರುಕುರುಂಪೆತೊಂಡನ ಭಕ್ತಿಗೆ ಒಲಿದು ಶಿವನು ಅವನನ್ನು ಕೈಲಾಸಕ್ಕೆ ಕರೆದೊಯ್ಯಬೇಕೆಂದು ನಿಶ್ಚಯಿಸುತ್ತಾನೆ. ಅದಕ್ಕೆ ಮೊದಲು ಭಕ್ತನ ಪರೀಕ್ಷೆಯಾಗಬೇಕು. ಈಶನ ಅಪ್ಪಣೆಯಂತೆ ದೇವಕೋಟಿಯೂ, ಶಿವಶರಣರುಗಳೂ ಭೂಲೋಕಕ್ಕೆ ತಿರುಕುರುಂಪೆತೊಂಡರಲ್ಲಿಗೆ ಬಂದು ತಮ್ಮ ವಸ್ತ್ರಗಳನ್ನು ಹಾಕಿದರು. ಭಕ್ತರ ಬಟ್ಟೆ ಒಗೆಯುವುದೇ ಒಂದು ಸೌಭಾಗ್ಯವೆನ್ನುವಂತೆ ತಿರುಕುರುಂಪೆತೊಂಡರು ಹಿಗ್ಗುತ್ತ, ಹಸಿವು ನೀರಡಿಕೆಗಳನ್ನು ಕಡೆಗಣಿಸಿ ಒಗೆದ. ರಾಶಿರಾಶಿ ಬಟ್ಟೆಯನ್ನು ಒಗೆದು ಒಗೆದು ಬಳಲಿ ಶಕ್ತಿಗುಂದಿ ಬೀಳುತೆದ್ದು ಮತ್ತೆ ಒಗೆದ. ಆದರೂ ಅವನ ಕಾಯಕನಿಷ್ಠೆ ಕಡಿಮೆಯಾಗಲಿಲ್ಲ ಬದಲು ದೃಢವಾಯಿತು. ಕೊನೆಗೆ 'ಬಗೆಯೊಳಂಜೆನಂಜೆ ದೇವಾ ಹೋಗನೆನುತ' ತನ್ನ ಪರಮನಿಷ್ಠೆಯನ್ನು ತೋರಿಸಿದ. ಗಣಸಮೂಹದಿಂದ ಭಕ್ತನನ್ನು ಮುಂದುಗೆಡಿಸುವುದು ಆಗಲಿಲ್ಲ.

ಶಿವ, ದೇವಿಯರನ್ನೊಡಗೊಂಡು ತಾನೇ ಬಂದ. ದೇವಿಯನ್ನು ಗಗನದಲ್ಲಿ ಬಿಟ್ಟು. ತಾನು ಬೇರೊಂದು ರೂಪುಧರಿಸಿ, ತನ್ನ ಗಜಚರ್ಮದ ಕಂತೆಯನ್ನು ತಿರುಕುರುಂಪೆತೊಂಡರಿಗೆ ಕೊಟ್ಟು ನಾಳೆ ಜಾವದೊಳಗೆ ಮಡಿಮಾಡಿಕೊಡಬೇಕೆಂದು ಹೇಳಿದ. ಎಷ್ಟು ಒಗೆದರೂ ಕಂತೆಯ ಕೊಳೆ ಹೋಗದು. ಒಗೆದುನೋಡಿ ಮತ್ತೆ ಒಗೆದು ಬಿಚ್ಚಿನೋಡಿ ಮತ್ತೆ ಒಗೆದ. ಅಂಗೈಗಳೊಳಗೆ ರಕ್ತ ಸುರಿಯುವವರೆಗೂ ಒಗೆದರೂ ಕೊಳೆಹೋಗದು. ಸುರಿಯುವ-ಮಳೆ-ಬೇರೆ ಸೂರ್ಯೋದಯ ವಾಗುವವರೆಗೆ ಒಗೆದ. ಕಂತೆ ಬೆಳ್ಳಗಾಗುವ ಸೂಚನೆಗಳೇ ಕಾಣಲಿಲ್ಲ. 'ಭಕ್ತ ಸಮಯಕ್ಕೆ ಸರಿಯಾಗಿ ಬರುವನು. ಏನುಮಾಡಲಿ!' ಎಂಬ ಕೊರಗು. ಆ ಭಕ್ತ ದೂರದಲ್ಲಿ ಕಾಣಿಸಿಕೊಂಡ. ಈತನು ವಚನ ಪಾಲಿಸಲಿಲ್ಲವಲ್ಲ ಎಂಬ ವ್ಯಥೆಯಿಂದ ಇನ್ನು ಬದುಕು ಸಾಕೆಂದು ಮನಸ್ಸು ಮಾಡಿ ತನ್ನ ದೇಹವನ್ನು ಇನ್ನೇನು ಕಲ್ಲಮೇಲೆ ಒಗೆದನು, ಅಷ್ಟರಲ್ಲಿ ಶಿವನೇ ಬಂದು ಅವನನ್ನು ಎತ್ತಿ ಅಪ್ಪಿಕೊಂಡು ಆಶೀರ್ವದಿಸಿ ಗಣಪದವಿಯನ್ನಿತ್ತ.

ತಿರುಕುರುಪ್ಪೆಯ ಕರ್ತವ್ಯನಿಷ್ಠೆ ಮತ್ತು ಫಲಗಳು ಓದುಗರಿಗೆ ಮೆಚ್ಚುಗೆಯಾಗುತ್ತವೆ. "ಕಾಯಕದ ಪವಿತ್ರವಾದ ತತ್ವಪಾಲನೆಯೊಂದಿಗೆ ಭಕ್ತಿ, ನಿಷ್ಠೆ

ಅರ್ಪಣಭಾವಗಳ ಚಿತ್ರವೂ ಇಲ್ಲಿದೆ. ಭೌತದೇಹವಳಿದರೂ ಕೈಕೊಂಡ ನಿಷ್ಠೆಯನ್ನು ಸೂಕ್ಷ್ಮತನುವಿನಿಂದ ಪೂರೈಸಬೇಕೆಂಬ ಉನ್ನತ ದೃಷ್ಟಿಯಿಲ್ಲಿದೆ".[೨೬]

'ಮಾನಕಂಜಾರ'ನೆಂಬ ಭಕ್ತನೊಬ್ಬ, ಶಿವಭಕ್ತರೂ ಸಮಯಾಸಮಯವೆನ್ನದೆ ಬಂದು ಏನು ಬೇಡಿದರೂ, ಒಡನೆಯೆ ಸಂತೋಷದಿಂದ ನೀಡುವುದು ಈತನ ವ್ರತ. ಈತ ಹೆಂಡತಿಯ ಕೋರಿಕೆಯನ್ನು ಈಡೇರಿಸಲೆಂದು, ಮನಸ್ಸಿಲ್ಲದ ಮನಸ್ಸಿನಿಂದ ಬೇಡಲಾರದೆ, ಬೇಡದಿರಲಾರದೆ, 'ಪುತ್ರಿಯನ್ನು ಕೊಡುದೇವ' ಎಂದು ಬೇಡಿ ಪಡೆದ. ಆಕೆ ಬೆಳೆದು ವಯಸ್ಕಳಾದಾಗ, ಚೋಳಭೂಪಾಲ ಆಕೆಯನ್ನು ತನ್ನ ಮಗನಿಗೆ ತಂದುಕೊಳ್ಳಲು ನಿಶ್ಚಯಿಸಿದ. ಮದುವೆಯ ಸಂಭ್ರಮದ ದಿನ ವಧೂವರರು ಅಲಂಕಾರಗೊಂಡು ಹಸೆಯ ಮೇಲೆ ಕುಳಿತಿದ್ದರು. ಇಂತಹ ಸಮಯದಲ್ಲಿ ಶಿವ, ಭಕ್ತನ ಮನವನ್ನು ಒರೆಹಚ್ಚಿ ನೋಡಲು ಭಿಕ್ಷುಕ ವೇಷದಲ್ಲಿ ಬಂದ. ಮಾನಕಂಜಾರರು, ಆ ಭಿಕ್ಷುಕನನ್ನು ಕರೆದೊಯ್ದು ಪೂಜಿಸಿದ. ತನ್ನಿಂದೇನಾಗಬೇಕು ಎಂದು ಕೇಳಿದ. ಅದಕ್ಕೆ ಭಿಕ್ಷುಕ ನಿಮ್ಮ ಮಗಳ 'ಮುಡಿ' ಬೇಕೆಂದು ಕೇಳಿದ.

ಮಾನಕಂಜಾರರು ಇದನ್ನು ಕೇಳಿ ಇನಿತೂ ವಿಚಲಿತರಾಗುವುದಿಲ್ಲ. ಮಗಳ ಮುಡಿಯನ್ನು ಕತ್ತರಿಸಿದ್ದೇ ಆದರೆ, ಮಂಗಳಕಾರ್ಯ ಹಾಳಾಗುತ್ತದೆ. ಜೊತೆಗೆ ಮಗಳ ಸೌಂದರ್ಯವೂ ಕೆಡುತ್ತದೆಂದು ಗೊತ್ತಿದ್ದರೂ ಹಿಂಜರಿಯದೆ, ಹಸೆಮಣೆ ಮೇಲೆ ಕುಳಿತಿದ್ದ ತಮ್ಮ ಮಗಳ ತಲೆಗೂದಲನ್ನೇ ಕತ್ತರಿಸಿ ದಾನಮಾಡಿದ ನಿಷ್ಠಾವಂತ ಭಕ್ತ. ಇಲ್ಲಿ ಮಾನಕಂಜಾರರ ಉದಾರ ಗುಣ ಅನುಪಮವಾದುದು.

ಒಲಘಾಂಡಮೂರ್ತಿಗಳು ಮಧುರಾಪುರದ ವ್ಯಾಪಾರಿ. ನಡೆ-ನುಡಿ ಒಂದೇ ಆದ ಸಜ್ಜನ. ಚೊಕ್ಕನಾಯನಾರ್ ಈತನ ಇಷ್ಟದೈವ. ಚೊಕ್ಕನಾಯನಾರರಿಗೆ ಸುವಾಸನೆ ಬೀರುವ ನವಚಂದನವನ್ನು ಪ್ರತಿದಿನವೂ ಅರ್ಪಿಸುವುದು ಈತನ ನೇಮ. ಇವನ ನೇಮ ನಿಷ್ಠೆಯನ್ನು ಪರೀಕ್ಷಿಸಲು, ಶಿವನೇ ಇವನ ಸಂಪತ್ತನ್ನು ಅಪಹರಿಸಿ, ಬಡವನನ್ನಾಗಿಸಿದ. ಹೊನ್ನು, ಒಡವೆ, ವಸ್ತ್ರಗಳು ತೀರಿದವು. ಹೊಲ-ಮನೆ ಮಾರಾಟವಾದವು. ಕೊನೆಗೆ ಉಳಿದುದು, ಹೆಂಡತಿಯ ಕೊರಳಲ್ಲಿದ್ದ ತಾಳಿ ಮಾತ್ರ. ತಾಳಿಯನ್ನು ಮಾರಿ, ಚಂದನವನ್ನು ಕೊಂಡು ತಂದು ಶಿವನಿಗರ್ಪಿಸುವ ದೃಶ್ಯವನ್ನು ಚಿತ್ರಿಸುವ ಮೂಲಕ, ಒಲಘಾಂಡಮೂರ್ತಿಗಳ ಚಂದನದ ನೇಮ ನಿಷ್ಠೆಯನ್ನು ಹರಿಹರ ಪರಿಣಾಮಕಾರಿಯಾಗಿ ಕಟ್ಟಿಕೊಡುತ್ತಾನೆ. ಹತ್ತು-ಹದಿನೈದು ದಿನ ಕಳೆಯಿತು. ಮುಂದೆ ಮಾಡುವುದೇನೆಂದು ತಿಳಿಯದೆ ಚಿಂತಿಸುತ್ತಿದ್ದಾಗ ಒಲಘಾಂಡಮೂತಿಯಗಳು ಭಕ್ತಿಯ ಉನ್ಮಾದಕ್ಕೆ ಒಳಗಾಗಿ ಸಾಣೆ ಕಲ್ಲಿನ ಮೇಲೆ ತಮ್ಮ ಮೊಳಕೈಯನ್ನಿತ್ತು ತೇಯುತ್ತಾನೆ. ಮೊಳಕಯ್ಯಿಂದ ಪರಿಮಳ ಹೊಮ್ಮಿತು: ಸುಗಂಧ ಸುರಿಯಿತು. ಒಲಘಾಂಡಮೂರ್ತಿಗಳ ಭಕ್ತಿಯ ಪರಾಕಾಷ್ಠತೆಯ ಚಿತ್ರಣವನ್ನು ಹರಿಹರ ಓದುಗರ ಮನಮುಟ್ಟುವಂತೆ ಚಿತ್ರಿಸಿದ್ದಾನೆ.

---

೨೬. ಅಡಿಟಿಪ್ಪಣಿ ೨೫ ರಂತೆ, ಪುಟ ೬೬.

ಶಿವನಿಗಾಗಿ ತನು, ಮನ, ಧನಗಳನ್ನೆಲ್ಲಾ ಸವೆಸಬೇಕು ಎಂಬ ತತ್ವವನ್ನು ಈ ರಗಳೆಯಲ್ಲಿ ಕಾಣಬಹುದು. ತಾವು ನಂಬಿದ ದೇವರಿಗೆ ಭಕ್ತಿಯನ್ನು ವ್ಯಕ್ತಪಡಿಸುವಲ್ಲಿ, ಭಕ್ತರು ನಾನಾ ಮಾರ್ಗಗಳನ್ನು ಅನುಸರಿಸುತ್ತಾರೆ. ಅಂತಹ ಒಂದು ಸಂದರ್ಭವನ್ನು ಈ ರಗಳೆಯಲ್ಲಿ ಕಾಣಬಹುದು.

ಇಂದೂ ಕೂಡ ದೇವರ ಹೆಸರಿನಲ್ಲಿ 'ಬಾಯಿಬೀಗ' ಹಾಕಿಸಿಕೊಳ್ಳುವುದನ್ನು, ನಾಲಿಗೆಗೆ ಕಬ್ಬಿಣದ ಸರಳನ್ನು ಚುಚ್ಚಿಕೊಳ್ಳುವುದನ್ನು, ಬೆಂಕಿಯ ಕೊಂಡದಲ್ಲಿ ನಡೆಯುವುದನ್ನು ಕಾಣಬಹುದು. ಇವೆಲ್ಲಾ ಭಕ್ತಿಯ ಹೆಸರಿನಲ್ಲಿ ನಡೆಯುವ 'ಸ್ವಹಿಂಸೆ'ಗಳು. ದೇವರು, ಭಕ್ತಿಯ ಹೆಸರಿನಲ್ಲಿ ನೋವನ್ನು ಅನುಭವಿಸುವ ವಿಶಿಷ್ಟ ಮನಸ್ಥಿತಿಯ ಭಕ್ತರು ಇವರು. ಪರರನ್ನು ಹಿಂಸಿಸುವುದಾಗಲೀ, ಸ್ವಹಿಂಸೆಯಾಗಲೀ ಭಕ್ತಿಯ ಹೆಸರಿನಲ್ಲಿ ಸಲ್ಲದು. ಶರಣರ ಧ್ಯೇಯ ಧೋರಣೆಗಳಿಗೆ ವಿರುದ್ಧವಾದ ಅಂಶಗಳು ಇವು.

ಚೋಳದೇಶದ ಶಿವಪುರದ ರುದ್ರಪ್ರಭು ಶುಚಿದೇವಿ ದಂಪತಿಗಳ ಮಗನಾಗಿ ಹುಟ್ಟಿದವರು 'ರುದ್ರಪಶುಪತಿ'ಗಳು. ಜೋಯಿಸರು ಈತನು ಹುಟ್ಟಿದ ಮುಹೂರ್ತವನ್ನು ನೋಡಿ, ಈತನು ವಿಷಧರನನ್ನು ಒಲಿಸಿಕೊಂಡು, ಧರೆಗೆ ಶಿವಭಕ್ತಿಯ ಬಟ್ಟೆಯನ್ನು ತೋರಿಸುವವನಾಗುತ್ತಾನೆ ಎಂದು ಭವಿಷ್ಯ ಹೇಳಿದ್ದರಂತೆ. ರುದ್ರಪಶುಪತಿ ಮುಗ್ಧ. ಆದರೆ ಈತನ ಮನಸ್ಸು ಪವಿತ್ರ; ಭಕ್ತಿ ಅಚಲ. ಅನುದಿನವೂ ಶಿವಧ್ಯಾನದಲ್ಲಿ ತಲ್ಲೀನನಾಗಿರುತ್ತಿದ್ದ.

ಶಿವಪುರಾಣದಲ್ಲಿ ಶಿವ, ಸಮುದ್ರ ಮಂಥನದ ಸಂದರ್ಭದಲ್ಲಿ ಹುಟ್ಟಿದ ಕಾಳಕೂಟವಿಷವನ್ನು ಕುಡಿದು ವಿಷಕಂಠನಾದುದನ್ನು ಕೇಳಿದ ರುದ್ರಪಶುಪತಿಗಳ ದುಗುಡಕ್ಕೆ ಮಿತಿಯೇ ಇಲ್ಲವಾಯ್ತು. ಆತನ ತಳಮಳ ಹೇಳತೀರದು. ಎಲ್ಲರನ್ನೂ ಹರಿ ಅಜರನ್ನೂ ಸಹ ಬಯ್ಯುವನು. ಪಾರ್ವತಿದೇವಿಯಾದರೂ ಸುಮ್ಮನಿದ್ದುದೇಕೊ? ಎಂದು ಮಿಡುಕುವನು. ಈ ಮುಗ್ಧಭಕ್ತ ವಿಷ ನಿವಾರಣಾರ್ಥವಾಗಿ ಸಮುದ್ರದಲ್ಲಿ ಕೊರಳಿನತನಕ ಮುಳುಗಿ ಪಂಚಾಕ್ಷರೀಮಂತ್ರ ಜಪಿಸತೊಡಗುವರು. ಅವನ ಮುಗ್ಧಮನಸ್ಸನ್ನು ಕವಿ ಹೃದಯಂಗಮವಾಗಿ ಚಿತ್ರಿಸುವುದು ಹೀಗೆ –

ಜ್ವಲನಂ ಜ್ವರಂಗೊಂಡನೆಂದು ಮಂತ್ರಸುವಂತೆ
ಜಲಕೆ ಶೀತಂ ಬಂದುದೆಂದು ಭಾವಿಸುವಂತೆ
ಮಾರುತಂ ಗುರಿಯೆತ್ತಿತೆಂದು ಮಾಣಿಸುವಂತೆ

(ಪುಟ ೭೦, ಸಾಲು ೧೫೧-೧೫೩)

ಅಗ್ನಿಗೆ ಜ್ವರ ಬಂದುದೆಂದು, ನೀರಿಗೆ ಚಳಿಬಂದುದೆಂದು, ಗಾಳಿಗೆ ಉರಿಹತ್ತಿತೆಂದು ರುದ್ರಪಶುಪತಿಯಂಥ ಮುಗ್ಧರು ಮಾತ್ರ ನಂಬಬಹುದು. ಇಂಥ ಮುಗ್ಧನ ನಿಷ್ಠಾಭಕ್ತಿ ಅನುಪಮವಾದುದು. ಧ್ಯಾನಾಸಕ್ತನಾಗಿ ಕಂಠಪ್ರಮಾಣ ನೀರಿನಲ್ಲಿ ನಿಂತಿರಲು

ಜಲಚರಂಗಳು ಅವರ ದೇಹದ ಮಾಂಸಖಂಡಗಳನ್ನೆಲ್ಲಾ ತಿಂದು ಅಸ್ಥಿ ಮಾತ್ರ ಉಳಿದರೂ ನಿಷ್ಠೆ ಕದಲಲಿಲ್ಲ.

ಇಂಥ ಮುಗ್ಧಭಕ್ತನನ್ನು ಪರೀಕ್ಷಿಸಬೇಕೆಂದು ಶಿವ, ಭಕ್ತನ ವೇಷ ಧರಿಸಿ ಬರುವನು. ಕಪಟವೇಷದ ಶಿವನು, ಹರನು ಗರಳಧರನಷ್ಟೇ ಏನು? ಕಯ್ಯಿ ತಲೆಯನ್ನು ಬಿಡಿಸು, ತೊಟ್ಟ ಹಾವನ್ನು ಬಿಡಿಸು; ಮಯ್ಯಲ್ಲಿ ಸರಗೊಂಡ ಸುರರ ಶಿರಗಳನ್ನು ಬಿಡಿಸು, ಹುಲಿಯ ತೊಗಲನ್ನು ಬಿಡಿಸು, ಗಜಚರ್ಮವನ್ನು ಬಿಡಿಸು. ಹಲವು ಮಾತೇಕೆ? ದಡ್ಡ, ವಿಷವೇಕೆ? ಬಿಡಿಸುವಾಯಿಸವೇಕೆ? ಸುಮ್ಮನೆ ಹೊರಟುಹೋಗು!'– ಎಂದು ಕಟಕಿಯಾಡುತ್ತಾನೆ. ಹರನಿಂದೆಯನ್ನು ಕೇಳಲಾರದ ಕೆರಳಿದ ರುದ್ರಪಶುಪತಿಗಳು–'ಎಲೆಲೆ ಶಿವನಿಂದೆ ಅಡಗಡಗು' ಎನ್ನುತ್ತ ವೇಷಧಾರಿಯ ಮೇಲೆ ಜಲವನ್ನು ಅಭಿಮಂತ್ರಿಸುವರು. ಆಗ ಶಿವ 'ಸತ್ಯದುರವಣಿಯ ನೇಹಕ್ಕಂಜಿ ಕಡುಪೊಸತೆನುತೆ' ಹೆದರಿ ನಿಜರೂಪು ದೋರುವನು. ಶಿವನನ್ನು ಕಂಡ ರುದ್ರ ಪಶುಪತಿಗೆ ಮಹಾನಂದವಾಗುತ್ತದೆ. ಕೂಡಲೇ ಅವನ ಕೊರಳಲ್ಲಿ ವಿಷವಿರುವುದೇ? ಎಂದು ತಾಯಿಯು ಮಗುವನ್ನು ವಿಚಾರಿಸಿಕೊಳ್ಳುವಂತೆ ಶಿವನನ್ನು ಕೇಳುತ್ತಾನೆ. ಕೊರಳಲ್ಲಿ ವಿಷವು ಇಲ್ಲದ್ದನ್ನು ಕಂಡು ಹರ್ಷಿತನಾಗುತ್ತಾನೆ.

ಈ ಕಥನದಲ್ಲಿ ಪಂಚಾಕ್ಷರೀ ಮಂತ್ರ ಗಣನೀಯ ಪಾತ್ರವನ್ನು ವಹಿಸಿದೆಯಾದರೂ, ಆ ಮಂತ್ರಶಕ್ತಿಯನ್ನು ಮುಗ್ಧಭಕ್ತಿ ಮೀರಿಸಿದೆ. ಭಗವಂತನು ಒಲಿಯುವುದು ಶುದ್ಧಹೃದಯಕ್ಕೆ; ದೃಢಭಕ್ತಿಗೆ, ಮನುಷ್ಯನ ಆಯುಷ್ಯ ತೀರಿದರೂ ನಿಷ್ಠೆ ತೀರಬಾರದು ಎಂಬ ದರ್ಶನವನ್ನು ಈ ರಗಳೆಯಲ್ಲಿ ಕಾಣಬಹುದು.

ಸಾಮಾನ್ಯ ಬೇಡನೊಬ್ಬ ಶಿವನಿಗೆ ಕಣ್ಣಿತ್ತು ಕಣ್ಣಪ್ಪದೇವರಾದ ಕಥೆ ಕರ್ನಾಟಕದಲ್ಲಿ ತೀರಾ ಜನಜನಿತ. ಕಥೆ, ಕಾವ್ಯ, ನಾಟಕ, ಕೊನೆಗೆ ಚಲನಚಿತ್ರವಾಗಿಯೂ ಬೆಳ್ಳಿಪರದೆಯ ಮೇಲೆ ಕಣ್ಣಪ್ಪ ವಿರಾಜಿಸಿದ್ದಾನೆ. ಭಕ್ತಿ ವ್ಯಕ್ತಮೂಲವಾದದ್ದೇ ಹೊರತು ಸಾಂಪ್ರದಾಯಿಕ ಚೌಕಟ್ಟಿಗೆ ಒಳಪಟ್ಟುದಲ್ಲ ಎಂಬುದನ್ನು ಕಣ್ಣಪ್ಪನ ಕಥೆ ಸೊಗಸಾಗಿ ನಿರೂಪಿಸುತ್ತದೆ. ನಿಷ್ಕಲ್ಮಶ ಮನದಿಂದ ಮಾಡುವ ಪೂಜೆ ಹೇಗಿದ್ದರೂ ಶಿವನನ್ನೊಲಿಸಬಲ್ಲದು. ಆಡಂಬರ ಪೂಜೆಗಿಂತ ಉನ್ನತವಾದುದು; ಫಲಕಾರಿಯಾದುದು. ಆರಾಧನೆಯನ್ನು ಅಳೆಯಬೇಕಾದುದ್ದು ವೈಭವದ ಆಚರಣೆಯಿಂದಲ್ಲ, ಮಾಡುವ ವಿಧಾನಗಳಿಂದಲ್ಲ, ಪೂಜಿಸುವ ವ್ಯಕ್ತಿಗಳ ವರ್ಣ, ವರ್ಗಗಳ ಹಿನ್ನೆಲೆಯಿಂದಲ್ಲ, ಅಂತರಂಗದ ನಿಷ್ಠೆಯಿಂದ. ಭಕ್ತಿಯ ಪ್ರಾಮಾಣಿಕ ಮತ್ತು ಡಾಂಬಿಕ ರೂಪಗಳನ್ನು ಈ ಕಥೆಯಲ್ಲಿ ಕಾಣುತ್ತೇವೆ. ಶಿವನಿಗೆ ಪ್ರಿಯವಾಗುವುದು ಬಾಹ್ಯಾಡಂಬರವಲ್ಲ; ಆಂತರಿಕಶುದ್ಧಿ ಎಂಬುದು ಈ ರಗಳೆಯಲ್ಲಿ ನಿರೂಪಿತವಾಗಿದೆ.

ಚೋಳಮಂಡಲದಲ್ಲಿ ತಿರುಕಾಳತ್ತಿ ಎಂಬ ಪಟ್ಟಣ. ಅಲ್ಲ ಕಣ್ಣಪ್ಪನೆಂಬ ಮುಗ್ಧ ಬೇಟೆಗಾರನೊಬ್ಬನಿದ್ದ. ಆತ ಒಂದು ದಿನ ಹುಲ್ಲೆಯನ್ನು ಬೆನ್ನಟ್ಟಿ ಹೋಗಿ ದಟ್ಟವಾದ ಅರಣ್ಯವನ್ನು ಹೊಕ್ಕ. ಹುಲ್ಲೆ ಓಡುತ್ತ ಕಾಳಹಸ್ತೀಶ್ವರನ ದೇವಸ್ಥಾನದ ಬಳಿ ಕಣ್ಮರೆಯಾಯ್ತು. ದೇವಾಲಯವನ್ನು ಹೊಕ್ಕ ಕಣ್ಣಪ್ಪ ಮೃಗವನ್ನು ತೋರಿಸು 'ಬೇಟೆಯಲ್ಲಿ ಅರ್ಧಭಾಗ ನಿನಗೆ ಕೊಡುತ್ತೇನೆ' ಎಂದು ಕಾಳಹಸ್ತೀಶ್ವರನಿಗೆ ಹರಕೆ ಹೊತ್ತ. ಮರೆಯಾದ ಜಿಂಕೆ ಮೈದೋರುತ್ತದೆ. ಬೇಟೆಯಾಡಿ ಹರಕೆಯಂತೆ ಅರ್ಧಭಾಗವನ್ನು ಶಿವನಿಗೆ ಅರ್ಪಿಸುತ್ತಾನೆ. ಅಂದಿನಿಂದ ಕಣ್ಣಪ್ಪ ಪ್ರತಿನಿತ್ಯ ತಾನು ಬೇಟೆಯಾಡಿದ್ದರಲ್ಲಿ ಅರ್ಧಭಾಗವನ್ನು ಶಿವನಿಗೆ ಅರ್ಪಿಸಿ ತನಗೆ ತೋಚಿದಂತೆ ಅರ್ಚಿಸುತ್ತಾನೆ. ಅರ್ಪಿಸಿದ ಬೇಟೆಯ ನೈವೇದ್ಯವನ್ನು ಶಿವ ಅದನ್ನು ಭೂತಗಳಿಗಿತ್ತು ತಾನೇ ಉಂಡವನಂತೆ ತೋರಿಸಿಕೊಳ್ಳುತ್ತಿದ್ದ. ಕಣ್ಣಪ್ಪನ ಭಕ್ತಿಭಾವ ಬೆಳೆದು ಗಾಢವಾಯ್ತು.

ಶಿವಾಲಯದ ಅರ್ಚಕರಿಗೆ ಇದು ರೇಜಿಗೆ ಹುಟ್ಟಿಸುತ್ತದೆ. ಪ್ರತಿನಿತ್ಯ ದೇವಾಲಯದಲ್ಲಿ ಕಾಣುವ ರಕ್ತ, ಮಾಂಸ ಇವುಗಳನ್ನು ಕಂಡು ಅಸಹ್ಯಪಟ್ಟುಕೊಳ್ಳುತ್ತಾರೆ. ಇದಕ್ಕೆ ಕಾರಣವಾದವರನ್ನು ಮನಸೋ ಇಚ್ಛೆಬೈದು, ದೇವಸ್ಥಾನವನ್ನು ಶುದ್ಧಿಗೊಳಿಸಿ, ತಾವೂ ಮಿಂದು ಶುದ್ಧರಾಗಿ ಶಿವನನ್ನು ಅರ್ಚಿಸುತ್ತಾರೆ. ಈ ಬಗ್ಗೆ ಶಿವ-ಪಾರ್ವತಿಯರ ಮಧ್ಯೆ ದೊಡ್ಡ ವಾಗ್ವಾದ ನಡೆಯುತ್ತದೆ. ಶಿವ ಬೇಡನ ಪರ, ಪಾರ್ವತಿ ಬ್ರಾಹ್ಮಣನ ಪರವಾಗಿ ವಾದಿಸುತ್ತಾರೆ. ಕೊನೆಯಲ್ಲಿ ಶಿವ 'ತನ್ನ ಭಕ್ತ ಎಂಥವನೆಂಬುದನ್ನು ನೀನೇ ನೋಡು' ಎನ್ನುತ್ತಾನೆ. ಪಾರ್ವತಿಯ ಕಣ್ಣು ತೆರೆಸಿದ ಪ್ರಸಂಗ ಈ ಕೆಳಗಿನಂತಿದೆ.

ಮಾರನೆಯ ದಿನ ಶಿವಾಲಯದಲ್ಲೇನಾದರೂ ರಕ್ತ, ಮಾಂಸ ಕಂಡರೆ ಅದಕ್ಕೆ ಕಾರಣನಾದ ಬೇಡನ ಕತೆ ಮುಗಿಸಲೆಂದು ಅರ್ಚಕ ಬರುತ್ತಾನೆ. ಶಿವಾಲಯಕ್ಕೆ ಬಂದು ನೋಡಿದರೆ, ಶಿವಲಿಂಗದಲ್ಲಿ ಎರಡು ಕಣ್ಣುಗಳು ಒಡಮೂಡಿದ್ದವು. ಒಂದು ಕಣ್ಣಿನಿಂದ ರಕ್ತ ಹರಿಯುತ್ತಿದೆ. 'ಅಯ್ಯೋ ನಾಡಿಗೆ ಕೇಡುಗಾಲ' ಎಂದು ಅರ್ಚಕ, ಈ ಸುದ್ದಿಯನ್ನು ಊರಿಗೆ ತಿಳಿಸಲು ಓಡುತ್ತಾನೆ. ಅನಂತರ ಬೇಡ ಅಲ್ಲಿಗೆ ಬಂದ. ಶಿವನ ಕಣ್ಣಿನಿಂದ ರಕ್ತ ಸುರಿಯುವುದನ್ನು ನೋಡಿ ತನ್ನ ಒಂದು ಕಣ್ಣನ್ನೇ ಕಿತ್ತು, ಶಿವನ ರಕ್ತಸೋರುವ ಎಡಗಣ್ಣಿಗೆ ಒತ್ತಿ ಕೂರಿಸುತ್ತಾನೆ. ಬಲಗಣ್ಣಿನಿಂದ ರಕ್ತ ಸುರಿಯಲಾರಂಭಿಸುತ್ತದೆ. ಬೇಡ ತನ್ನ ಇನ್ನೊಂದು ಕಣ್ಣನ್ನೂ ಶಿವನಿಗೆ ಅರ್ಪಿಸಲು ಸಿದ್ಧನಾಗುತ್ತಾನೆ. ತನ್ನ ಎಡಗಾಲಿನ ಹೆಬ್ಬೆರಳನ್ನು ಬಲಗಣ್ಣಿನ ಬಳಿ ಗುರುತಿಗಾಗಿ ಇರಿಸಿ ತನ್ನ ಬಲಗಣ್ಣನ್ನು ಕಿತ್ತು ಶಿವನಿಗೆ ಅರ್ಪಿಸುತ್ತಾನೆ. ಶಿವನಿಗೆ ಕಣ್ಣು ನೀಡಿ ಕಣ್ಣಪ್ಪನಾಗುತ್ತಾನೆ. ಶಿವಮೆಚ್ಚಿ ಅಪ್ಪಿ ಅವನನ್ನು ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನಿತ್ತ.

ಲಿಂಗ ಬೇಡನ ಪಾಲಿಗೆ ಬರೀ ಕಲ್ಲಲ್ಲ; ಮನುಷ್ಯರಂತೆ ಅದಕ್ಕೆ ಹಸಿವುಂಟು; ನೋವು ನಲಿವುಗಳುಂಟು. ಶಿವನಿಗೆ ಕಣ್ಣುಬೇನೆ ಬಂದಾಗ ಕಣ್ಣು ನೀಡಬೇಕಾದ್ದು ತನ್ನ ಧರ್ಮವೆಂದು ಕಣ್ಣಪ್ಪ ಭಾವಿಸುತ್ತಾನೆ.

"ಬೇಡರ ಕಣ್ಣಪ್ಪನ ರಗಳೆಯಲ್ಲಿ, ವ್ಯಾಧವೃತ್ತಿಯಲ್ಲಿರುವ ಬೇಡರವನ ಅಶಾಸ್ತ್ರೀಯ ಆರಾಧನೆಗೂ, ಉಚ್ಚವರ್ಣದ ಶಿವಬ್ರಾಹ್ಮಣನ ಸಾಂಪ್ರದಾಯಿಕ ಪೂಜೆಗೂ ಇರುವ ವ್ಯತ್ಯಾಸವನ್ನು ಗುರುತಿಸಿ, ಶಿವನಿಗೆ ಕಣ್ಣಪ್ಪನ ಆರಾಧನೆಯೇ ಏಕೆ ಇಷ್ಟವಾಯಿತೆಂಬುದನ್ನು ಹರಿಹರ ಎತ್ತಿ ಹಿಡಿಯುತ್ತಾನೆ. ಉತ್ತಮ ವರ್ಣದಲ್ಲಿ ಹುಟ್ಟಿ ಶಾಸ್ತ್ರಾನುಸಾರಿಯಾಗಿಮಾಡಿದ ಮಾತ್ರಕ್ಕೆ ಆ ಪೂಜೆ ಶ್ರೇಷ್ಠವಲ್ಲ. ಹಾಗೆಯೇ ಜಾತಿಯಲ್ಲಿ ಕೀಳಾದರೂ, ಆರಾಧನೆಯ ವಿಧಾನ ಅಶಾಸ್ತ್ರೀಯವೂ, ರೂಕ್ಷವೂ ಆದ ಮಾತ್ರಕ್ಕೆ, ಆ ಪೂಜೆ ಕನಿಷ್ಠವಲ್ಲ. ಏಕೆಂದರೆ ಆಯಾ ಆರಾಧನೆಗಳನ್ನು ಅಳೆಯಬೇಕಾದದ್ದು, ಪೂಜಿಸುವ ವ್ಯಕ್ತಿಗಳ ಅಂತರಂಗದ ನಿಷ್ಠೆಯಿಂದ ಮಾತ್ರ. ಶಿವಲಿಂಗದ ಕಣ್ಣಲ್ಲಿ ರಕ್ತಸುರಿಯಲು ಶುರುವಾದಾಗ, ಶಾಸ್ತ್ರೀಯವಾಗಿ ಪೂಜಿಸುತ್ತಿದ್ದ ಶಿವಬ್ರಾಹ್ಮಣ, ತನ್ನ ಶಾಸ್ತ್ರಜ್ಞಾನದಿಂದ 'ಇದು ಅರಸಿಂಗೆ ಕೇಡು, ದೇಶಕ್ಕೆ ಪೊಲ್ಲದೋ ಎಂದು, ಅದೊಂದು ಉತ್ಪಾತವೆಂದು ತರ್ಕಿಸುತ್ತಾನೆ. ಆದರೆ ಅದೇ ದೃಶ್ಯವನ್ನು ಕಣ್ಣಪ್ಪನು ಕಂಡಾಗ ತಳಮಳಿಸಿ, ತನ್ನ ಕಣ್ಣನ್ನೇ ಕಿತ್ತು ಶಿವಲಿಂಗದ ಕಣ್ಣಿಗೆ ಜೋಡಿಸುತ್ತಾನೆ. ಈ ನಡವಳಿಕೆ ತಾನೊಲಿದ ದೈವದ ವಿಚಾರದಲ್ಲಿ ಮುಗ್ಧವಾದ ಹಾಗೂ ಗಾಢವಾದ ಅನುರಕ್ತ ಇದ್ದವರಿಗೆ ಮಾತ್ರ ಸಾಧ್ಯ. ನಿಜವಾದ ಭಕ್ತಿ, ನಿಜವಾದ ಪ್ರೀತಿಯಂತೆ, ತನ್ನನ್ನು ತಾನು ಸಂಪೂರ್ಣವಾಗಿ ಸಮರ್ಪಿಸಿಕೊಳ್ಳಲು ಸಿದ್ಧವಾಗುತ್ತದೆ. ಈ ಕಾರಣದಿಂದಲೆ ಕಣ್ಣಪ್ಪನ ಪೂಜೆ, ಶಿವ ಬ್ರಾಹ್ಮಣನ ಪೂಜೆಗಿಂತ ಶಿವನಿಗೆ ಹೆಚ್ಚು ಪ್ರಿಯವಾಗುತ್ತದೆ."[೧೭]

ಪೆರಿಯಪುರಾಣದಲ್ಲಿನ ಕಣಪ್ಪನ ಪಾತ್ರಕ್ಕೆ, ಹರಿಹರನ ಕಣ್ಣಪ್ಪನ ಪಾತ್ರಕ್ಕೂ ವ್ಯತ್ಯಾಸವಿದೆ. ಪೆರಿಯಪುರಾಣದ ಶಿವ ಕಣ್ಣಪ್ಪನಿಂದ ಎಂಜಲಾದ ಮಾಂಸದ ತುಣುಕುಗಳನ್ನು ನೇರವಾಗಿ ತಿಂದು ಸವಿದರೆ, ಹರಿಹರನ ಶಿವ ಭೇದ ಮಾಡಿದ್ದಾನೆ. ಪೆರಿಯಪುರಾಣದ ಶಿವ ಕಣ್ಣಪನ್ನು ಬಲಭಾಗದಲ್ಲಿ ನಿಲ್ಲಿದಿಕೊಳ್ಳುತ್ತಾನೆ. ಆದರೆ ಹರಿಹರನ ಶಿವ ಕಣ್ಣಪ್ಪನಿಗೆ ನಿರ್ಮಲದೇಹತಂದು ಕಣ್ಣಪ್ಪನನ್ನೂ ಕೈಲಾಸಕ್ಕೆ ಕರೆದುಕೊಂಡುಹೋಗುತ್ತಾನೆ.

ಶಿವ ಕಣ್ಣಪ್ಪನಿಗೆ ಎಡೆಯನ್ನು ತಾನೇ ಸ್ವೀಕರಿಸಿದ ಭ್ರಮೆ ಹುಟ್ಟಿಸಿ, ಭೂತಗಳಿಗೆ ಕೊಟ್ಟುಬಿಡುವ ಸನ್ನಿವೇಶ "ಹರಿಹರ ಇಲ್ಲಿ ಚಿತ್ರಿಸುವ ಶಿವಬ್ರಾಹ್ಮಣ ಶಿವ ಎಂದೂ ಮಾಂಸ ತಿಂದು ಜಾತಿ ಕೆಡಿಸಿಕೊಳ್ಳಲಾರ. ಕೆಳವರ್ಗದವರ ಏಕನಿಷ್ಠೆಗೆ, ಮೇಲ್ವರ್ಗ ತೋರುವ ಇಬ್ಬಂದಿತನದ ಪ್ರತಿಕ್ರಿಯೆ ಮತ್ತೆ ಮೋಸಕ್ಕೆ ಸಾಕ್ಷಿಯಾಗಿದೆ". [೧೮]

ಆಹಾರದ ವಿಚಾರದಲ್ಲಿ ನೇಮನಿಷ್ಠೆಯೆಂದಿದ್ದ ವಚನಕಾರರ ಪ್ರಭಾವ, ಹರಿಹರನ ಮೇಲಾಗಿದ್ದರಿಂದ ಆತ ಶಿವನಿಗೆ ಮಾಂಸ ತಿನ್ನಿಸಲು ಇಷ್ಟಪಡಲಿಲ್ಲ.

---

೧೭. ಜಿ. ಎಸ್. ಶಿವರುದ್ರಪ್ಪ, ಸಾಧನೆ, ಸಂಪುಟ - ೬, ಸಂಚಿಕೆ ೪, ಪುಟ ೬

೧೮. ಶಿವಾನಂದ ಎಸ್. ವಿರಕ್ತಮಠ (ಸಂ) ಹರಿಹರನ ರಗಳೆಗಳು-ಸಾಂಸ್ಕೃತಿಕ ಮುಖಾಮುಖಿ, ಪುಟ ೫೮.

ಇದೇ ಸಂದರ್ಭದಲ್ಲಿ ೨೦೦೮ನೇ ಆಗಸ್ಟ್ ತಿಂಗಳಿನಲ್ಲಿ ನಡೆದ ಆಧುನಿಕ ಕಣ್ಣಪ್ಪನ ಪ್ರಕರಣವನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಬಾಗಲಕೋಟೆ ಜಿಲ್ಲೆಯ, ಅಡಗಲ್ ಗ್ರಾಮದ ನಿವಾಸಿ ' ಮುದುಕಪ್ಪ' ಎಂಬ ಹೆಸರಿನ ವ್ಯಕ್ತಿ ದಿಗಂಬರೇಶ್ವರ ಮಠದಸ್ವಾಮಿಗೆ ತನ್ನ ಎರಡು ಕಣ್ಣುಗಳನ್ನು ಅರ್ಪಿಸಿ ಬೇಡರ ಕಣ್ಣಪ್ಪನನ್ನೂ ಮೀರಿಸಿದ. ಆ ಮೂಲಕ ತನ್ನ ಭಕ್ತಿಯ ಪರಾಕಾಷ್ಠತೆಯನ್ನು ಪ್ರದರ್ಶಿಸಿದ. ತಾನೇನು ಮಾಡುತ್ತೀದೆನೆ ಎಂಬುದರ ಅರಿವೇ ಇಲ್ಲದ ಆತ ಉನ್ಮಾದಕ್ಕೆ ಒಳಗಾದವರಂತೆ ವರ್ತಿಸಿದ. ಕೆಲವು ದಿನಗಳು ಕಳೆದ ಮೇಲೆ ಆತನಿಗೆ ವಾಸ್ತವದ ಅರಿವಾಗಿ ಪಶ್ಚಾತಾಪ ಪಟ್ಟಿದ್ದಂತು ಸತ್ಯ.

ಈ ಹಿನ್ನಲೆಯಲ್ಲಿ ಹಿಂದೆ ಬೇಡರ ಕಣ್ಣಪ್ಪನಂತಹ ಭಕ್ತರಿದ್ದರೆ? ಎಂದು ಅನುಮಾನಿಸುವಂತೆಯೇ ಇಲ್ಲ.

ತಿರುನಾಳ್ಪೋವ ಚೋಳದೇಶದ ಆದನೂರು ಎಂಬ ಪುರದವ, ಪೊನ್ನಾಂಬಲದ ತಿರುನಾಳನ್ನು ಕಾಣಬೇಕೆಂಬ ಕನಸು ಈತನದು ಪೊನ್ನಾಂಬಲಕ್ಕೆ ಹೋಗುತ್ತೇನೆ ಎನ್ನುತ್ತಲೆ ಇದ್ದುದರಿಂದ 'ನಾಳೆ ಹೋಗುವವ'(ನಾಳ್ಪೋವ) ಎಂಬ ಹೆಸರಾಯಿತು. ಪೊನ್ನಾಂಬಲಕ್ಕೆ ಹೋಗಬೇಕೆಂಬ ಕನಸು ನನಸಾದುದು ಹನ್ನೆರಡು ವರ್ಷಗಳು ಕಳೆದ ಮೇಲೆ, ಒಂದು ಸಲ ಅವನ ಆಸೆ ಹೀಡೆರುವ ಸನ್ನಿವೇಶ ಬಂತು. ಪೊನ್ನಾಂಬಲದ ತಂಡದಲ್ಲಿ ಸೇರಿ ಕೆಲಸ ಮಾಡುವ ಪ್ರಸಂಗ. ತಿರುನಾಳಿಗೆ ನೆಲ್ಲು ಹೊತ್ತು ಹೊಯ್ಯುವ 'ಬಿಟ್ಟಿ' ಕೆಲಸ ಅದು. ಒಬ್ಬ ಬ್ರಾಹ್ಮಣ ಬಂದು ಪೊನ್ನಾಂಬಲಕ್ಕೆ ಬಿಟ್ಟಿ ಕೆಲಸ ಇದೆ ಎಂದು ಹೇಳುತ್ತಾನೆ. ಅದನ್ನು ಕೇಳಿ ಅವನಿಗೆ ಅತೀವ ಸಂತೋಷವುಂಟಾಗುತ್ತದೆ. ನೆಲ್ಲು ಮೂಟೆಗಳನ್ನು 'ಐದಾರೆಳೆಂಟು ಹೊರಿಸು' ಎಂದು ಉತ್ಸಾಹದಿಂದ ಕೆಲಸ ಮಾಡುವುದಕ್ಕೆ ಮನಸ್ಸು ಬರುತ್ತದೆ. 'ಶಿವನ ಭಕ್ತಿಯ ಚಿತ್ರವನ್ನು ಹೊರುವಂತೆ' 'ತಿರುನಾಳನ್ನು ತಲೆಗೆರಿಸುವಂತೆ' ಮೂಡೆಗಳನ್ನು ಹೊರುತ್ತಾನಂದು ಹರಿಹರ ವರ್ಣಿಸುತ್ತಾನೆ. ಸಾವಿರಾರೂ ಮೂಡೆಗಳನ್ನು ಹೊತ್ತ ಬಿಟ್ಟಿಗರು ಪೊನ್ನಾಂಬಲದತ್ತ ಹೊರಡುತ್ತಾರೆ. ಅವರ ಮಧ್ಯೆ ತಿರುನಾಳ್ಪೋವ ಹಾಡುತ್ತ, ಕುಣಿಯುತ್ತಾ ಬರುತ್ತಾನೆ. ದೇಗುಲದ ಪೂರ್ವದ ಬಾಗಿಲ ದಿಕ್ಕಿನಲ್ಲಿ ಹಿರಿಯ ಮಾಹೇಶ್ವರರು ನೆರೆದಿದ್ದಾರೆ. ಅಲ್ಲಿ ತಿರುನಾಳ್ಪೋವರು ಭಕ್ತಿ ಪರವಶರಾಗಿ ಮೂಡೆ ಸಹಿತ ಕುಣಿದಾಡುತ್ತಿದ್ದಾರೆ.

ಶಿವ ಕೈಲಾಸದಲ್ಲಿ ಪಾರ್ವತಿಗೆ'ನೆನೆವುತ ತಿರುನಾಳಾದ, ನೆನೆವುತೆ ಎನ್ನವನಾದ' ಎಂದು ವಿವರಿಸಿ, ಒಬ್ಬ ಪೂಜಾರಿಯನ್ನು ಕಳುಹಿಸುವನು. ಆತ ತಿರುನಾಳ್ಪೋವನನ್ನು ಮುಟ್ಟಲು ಹಿಂಜರಿದು ಹಿಂದೆಬರುತ್ತಾನೆ. ಆಗ ಶಿವ ನಂದೀಶನನ್ನು ' ತಿರುನಾಳ್ಪೋವನನ್ನು ಕೊಂಡದಲ್ಲಿ ಮುಳುಗಿಸಿ ನಮ್ಮಲ್ಲಿಗೆ ಕರೆದು ಕೊಂಡು ಬಾ' ಎಂದನು ಶಿವನ ಅಪ್ಪಣೆಯಂತೆ ನಂದೀಶ್ವರ ತಿರುನಾಳ್ಪೋವರನ್ನು

ಕೊಂಡದಲ್ಲಿ ಮುಳುಗಿಸಿದ. ಮುಳುಗಿ ಮೇಲೇಳುವಾಗ ತಿರುನಾಳ್ಪೋವರ ಸ್ವರೂಪವೇ ಬೇರೆಯಾಗಿತ್ತು. 'ಕುಲವಳಿದು ಕುಲನಾಮವಳಿದಿತ್ತು. ' ಶಿವ ಆತನಿಗೆ ಗಣಪದವಿಯನ್ನಿಯತ್ತ. ರಗಳೆಯಲ್ಲಿ ಅನ್ವರ್ಥನಾಮವಿದೆ. (ಅಂಕಿತನಾಮವಿಲ್ಲ) ಪೆರಿಯಯಪುರಾಣದಲ್ಲಿ ಈತನಿಗೆ ನಂದ ಎಂದು ಹೆಸರು. ಈತನಿಗೆ ಶಿವ; ರಾತ್ರಿ ಯಲ್ಲಿ ಕನಸಿನಲ್ಲಿ ಕಾಣಿಸಿಕೊಂಡು ಉರಿಯಲ್ಲಿ ಮಿಚಿದು ಕೀಳ್ಕುಲದ ಕೆಸರು ಕಳೆದು ಮೇಲ್ಕುಲದ ಬ್ರಾಹ್ಮಣರೊಡನೆ ಬಾ ಎಂದ. ಇದೇ ರೀತಿ ಮೂರು ಸಾವಿರ ಬ್ರಾಹ್ಮಣರ ಕನಸಿನಲ್ಲಿ ಬಂದು ಭಕ್ತನನ್ನು ಬರಮಾಡಿಕೊಳ್ಳಲು ತಿಳಿಸಿದ. ಮರುದಿನ ಬ್ರಾಹ್ಮಣರು ಅಗ್ನಿಕುಂಡ ಮಾಡಿದರು. ನಂದ ಕುಂಡ ಪ್ರವೇಶಿಸಿ ಪುಣ್ಯ ಶರೀರಿಯಾಗಿ ಎದೆ ಮೇಲೆ ಯಜ್ಞೋಪವೀತದಿಂದ ಬ್ರಾಹ್ಮಣನಂತೆ ಶೋಭಿಸಿದ, ಬ್ರಾಹ್ಮಣರು ನಂದನನ್ನೂ ಒಳಗೆ ಕರೆ ದೊಯ್ದರು.

ತಮಿಳು ಕಥೆಯಲ್ಲಿ ಬೆಂಕಿಯಲ್ಲಿ ಹೊಗಿಸಿದರೆ, ಕನ್ನಡದ ಕಥೆ ನೀರಿನಲ್ಲಿ ಹೊಗಿಸುತ್ತದೆ. ಒಟ್ಟಾರೆ ಎರಡೂ ಕಡೆ ಕೆಳಜಾತಿಯ ಜನಕ್ಕೆ ದೇಗುಲದ ಪ್ರವೇಶ ಅಷ್ಟು ಸುಲಭವಾಗಿರಲಿಲ್ಲ ಎನ್ನುವುದು ತಿಳಿಯುತ್ತದೆ. ಆ ಕಾಲದ ಸಾಮಾಜಿಕ ಪರಿಸ್ಥಿತಿಯ ಅರಿವು ಇದರಿಂದ ತಿಳಿಯುತ್ತದೆ.

"ಕೆಳವರ್ಗದ ದೇಹ ಶುದ್ಧಿಯಾಗದೆ, ಅಳಿಯದೆ, ಅಥವಾ ಪರಕಾಯ ಪ್ರವೇಶಿಸದೆ ಶಿವಲೋಕ ಸಾಧ್ಯವಾಗುವುದಿಲ್ಲ. ದೇಹ ಧರ್ಮದಿಂದಲೇ ಕೆಳವರ್ಗದ ಭಕ್ತಿ ನಿರ್ಣಯವಾಗುವುದಾದರೆ, ಊರ್ಧ್ವಮುಖ ಸಾಮಾಜಿಕ ಬದಲಾವಣೆ ಭಕ್ತಿ ಪಂಥದಿಂದಲೂ ಅಸಾಧ್ಯವಾಯಿತು. ಕೆಳವರ್ಗ ನಿಷ್ಠಾವಂತ ಭಕ್ತಿಯಿಂದಲೂ ಎಂಥ ಭೌತಿಕ ಮತ್ತು ಮಾನಸಿಕ ಹಿಂಸೆಗೆ ಸದಾಕಾಲವೂ ಒಳಗಾಯಿತು! ಹೀಗಿರುವಾಗ ಶಿವಭಕ್ತರ ಜೀವನ ಚರಿತ್ರೆಯಲ್ಲಿ ಎಂಥ ಮೌಲ್ಯಗಳನ್ನೂ ಹರಿಹರ ಚಿತ್ರಿಸಿದ್ದಾನೆ ಎಂಬುದನ್ನು ಅರಿಯಬಹುದು."[೨೯]

ಏಕನಿಷ್ಠೆಯನ್ನು ಪ್ರಧಾನವಾಗಿ ಇಟ್ಟುಕೊಂಡು ರಚನೆಯಾದದ್ದು ಚಂಡೇಶ ಪಿಳ್ಳೆಯ ರಗಳೆ. ತನ್ನ ನಿಷ್ಠೆಗೆ ಅಡ್ಡಿಯುಂಟಾದ ಸಂದರ್ಭದಲ್ಲಿ, ತಂದೆ ಎನ್ನುವುದನ್ನೂ ನೋಡದೆ 'ಭವಿ' ಎಂದು ಆತನ ಶಿರಸ್ಸನ್ನು ಕತ್ತರಿಸಿದ ಉಗ್ರನಿಷ್ಠಾವಂತ ಚಂಡೇಶಪಿಳ್ಳೆ.

ಚೋಳಮಂಡಲದ ಕಾವೇರಿ ನದಿದಡದಲ್ಲಿರುವ ನಲ್ಲೂರು ಗ್ರಾಮದ ಅಚ್ಚುತಭಟ್ಟ ಮತ್ತು ಸಾವಿತ್ರಿ ಎಂಬ ಬ್ರಾಹ್ಮಣ ದಂಪತಿಗಳು ಪಿಳ್ಳೆಯಾರ್(ವಿನಾಯಕ) ನೋಂಪಿಯನ್ನು ಮಾಡಿ ಒಂದು ಗಂಡುಮಗುವನ್ನು ಪಡೆಯುತ್ತಾರೆ. ಮಗು ಹುಟ್ಟಿದಾರಭ್ಯ ಹನ್ನೆರಡುದಿನದವರೆಗೆ ಒಂದೇ ಸಮನೆ ಚಂಡಿಹಿಡಿಯುತ್ತದೆ. ಮಗು ಚಂಡಿ ಹಿಡಿದಿದ್ದರಿಂದ ಮತ್ತು ಪಿಳ್ಳೆಯಾರ್ ಅನುಗ್ರಹದಿಂದ ಹುಟ್ಟಿದ್ದರಿಂದ ಮಗುವಿಗೆ ಚಂಡೇಶಪಿಳ್ಳೆ ಎಂದು ನಾಮಕರಣ ಮಾಡಿದರು. ಚಂಡೇಶ ಹುಟ್ಟುತ್ತಲೆ ಮನೆಗೆ

---

೨೯. ಅಡಿಟಿಪ್ಪಣಿ ೨೮ ರಂತೆ, ಪುಟ ೫೯

ದಾರಿದ್ರ್ಯ ಅಡಿಯಿಟ್ಟಿತಂತೆ. ಈ ಹುಡುಗನನ್ನು ಯಾರಿಗಾದರೂ ದಾನ ಮಾಡಿಬಿಡು ಎಂದು ಕೆಲವರು ಅಚ್ಯುತಭಟ್ಟನಿಗೆ ಹೇಳಿದರು. ಮಗನಿಗಿಂತ ಸಿರಿಸಂಪತ್ತು ಹೆಚ್ಚೆ? ಗಣಪತಿಯ ವರದಿಂದ ಹುಟ್ಟಿರುವ, ಒಬ್ಬನೇ ಮಗನನ್ನು ಬಿಟ್ಟು ಧನವನ್ನಿಟ್ಟುಕೊಂಡು ಮಾಡುವುದೇನು? ಎನ್ನಿಸಿತು ಅಚ್ಯುತಭಟ್ಟನಿಗೆ.

ಹುಡುಗನಿಗೆ ಹನ್ನೆರಡು ವರ್ಷವಯಸ್ಸಾದಾಗ, ತಂದೆ ತಾಯಿಗಳು ಚಂಡೇಶನನ್ನು ಊರಜನರ ದನಕಾಯಲು ನೇಮಿಸಿದರು. ಒಂದು ಸಲ ಮಾಹೇಶ್ವರನು ಚಂಡೇಶ್ವರನಿದ್ದ ಅಡವಿಗೆ ಹೋಗಿ ಅವನಿಗೆ ಕಾಣಿಸಿಕೊಂಡು, ಪಂಚಾಕ್ಷರೀ ಮಂತ್ರೋಪದೇಶವಿತ್ತು, ಮಳಲ ಲಿಂಗವೊಂದನ್ನು ತೋರಿ, ಅದನ್ನು ಪ್ರತಿದಿನವೂ ಪೂಜಿಸಬೇಕೆಂದು ಹೇಳಿ ಮಾಯವಾದನು. ತಾನು ಉಪದೇಶ ಪಡೆದ ಸಂಗತಿಯನ್ನು ಮತ್ತಾರಿಗೂ – ತಂದೆ ತಾಯಿಗಳಿಗೆ ಸಹ ತಿಳಿಸಬಾರದೆಂದು ಗುರುವಿನ ಆಜ್ಞೆಯಾಗಿದ್ದು, ಚಂಡೇಶ ಆ ಸಂಗತಿಯನ್ನು ಯಾರಿಗೂ ಹೇಳಿರಲಿಲ್ಲ. ಚಂಡೇಶ ತನ್ನ ಭಕ್ತಿ ತನ್ಮಯತೆಯಿಂದ ಶಿವಲಿಂಗವನ್ನು ಪೂಜಿಸಿ, ಹಸುಗಳನ್ನು ಕರೆದು ಕ್ಷೀರಾಭಿಷೇಕ ಮಾಡತೊಡಗಿದ. ಇತ್ತ ಊರಿನಲ್ಲಿ ಹಾಲಿಲ್ಲದೆ ಕರುಗಳು ಸಾಯತೊಡಗಿದವು. ಹಸುಗಳ ಯಜಮಾನರು ಚಂಡೇಶನ ತಂದೆಯಲ್ಲಿ ದೂರಿದರು.

ಮಗ ಏನು ಮಾಡುತ್ತಾನೆಂದು ನೋಡಲು ತಂದೆ ಬಂದು ಒಂದು ಮರವೇರಿ ಅವಿತುಕೊಂಡ. ಚಂಡೇಶನು ಪೂಜಿಸುವ ಮಳಲಲಿಂಗದ ಮೇಲೆ ಹಸುಗಳಿಂದ ಕ್ಷೀರಾಭಿಷೇಕ ನಡೆಯಲು, ಭಟ್ಟರಿಗೆ ಮಗನ 'ಅವಿವೇಕ' ಅರಿವಾಗಲು ಮರದಿಂದ ಇಳಿದು ಬಂದು, ಕೋಪದಿಂದ ಲಿಂಗವನ್ನು ಮುಟ್ಟುವುದರಲ್ಲಿರಲು, ಚಂಡೇಶನು 'ಉರಿದೆದ್ದು ಕೋಲ್‌ಗೊಂಡು ಫಡ ಕುನ್ನಿ ಭವಿನಾಯೆ ಒಡೆಯನಂ ಮುಟ್ಟುವಾ' ಎಂದು ಅಬ್ಬರಿಸುತ್ತ ತಂದೆಯನ್ನು ಹೊಡೆದಂ ಹೊಡೆದನಮ್ಮಮ್ಮ!' ಆ ಸಂದರ್ಭದಲ್ಲಿ ಚಂಡೇಶಪಿಳ್ಳೆಗೆ 'ತಂದೆ' ತಂದೆಯಾಗಿ ಕಾಣದೆ ಒಬ್ಬ ಭವಿಯಾಗಿ ಕಾಣುತ್ತಾನೆ. ಹೊಡೆದವನು ಲಿಂಗದ ಬಳಿಗೆ ಬಂದು 'ಮನನೊಂದುದೇ ತಂದೆ, ಹೂಗಳಿಗೆ ಮೃದುವಪ್ಪ ತನು ಕಂದೀತೇ ತಂದೆ' ಎನ್ನುತ್ತಿರಲು ಗಾಯಗೊಂಡಿದ್ದ ಭಟ್ಟ ಎಚ್ಚತ್ತು 'ನೀರು, ನೀರು' ಎನ್ನಲು ಆ ಭವಿಯ ದನಿಯನ್ನು ಕೇಳಿದ ಚಂಡೇಶ ಮತ್ತಷ್ಟು ಕೆರಳಿ, 'ಶಿವದ್ರೋಹಿ' ಇನ್ನೂ ಇರುವೆಯಾ ಎಂದು, ಹಿಡಿದಿರುವ ಕೋಲು ಕೊಡಲಿಯಾಗಲು ತಂದೆಯ ತಲೆಯುರುಳಿಸಿದನು. ಚಂಡೇಶನ ಉತ್ಕಟಭಕ್ತಿಯನ್ನು ಮೆಚ್ಚಿ ಶಿವ ಗಣಪದವಿಯನ್ನಿತ್ತ.

ತಂದೆಯನ್ನೇ ಕೊಲ್ಲುವುದು ಅದೆಂತಹ ಭಕ್ತಿ. ಭಕ್ತಿಯ ಆವೇಶಕ್ಕೆ ಒಳಗಾದ ಚಂಡೇಶಪಿಳ್ಳೆ ತಾನು ಮಾಡುತ್ತಿರುವುದೇನು ಎಂಬುದನ್ನು ತಿಳಿಯದವ. ಹಿಂಸೆ

ಶರಣರ ಮೌಲ್ಯಗಳಿಗೆ ವಿರುದ್ಧವಾದದ್ದು. ಈರೀತಿಯಲ್ಲಿ ಹರಿಹರನ ರಗಳೆಗಳಲ್ಲಿ ಶರಣಧರ್ಮಕ್ಕೆ ವಿರುದ್ಧವಾದ ಅನೇಕ ಅಂಶಗಳನ್ನು ಕಾಣಬಹುದು.

ಚೋಳಮಂಡಲದ ಕರವೂರು ಎಂಬಲ್ಲಿ 'ಇರಿಭಕ್ತ' ಎಂಬ ವೀರ ಶಿವಭಕ್ತನಿದ್ದ. ಶಿವಭಕ್ತ ಸಂರಕ್ಷಣೆಯೇ ಆತ ಹಿಡಿದಿದ್ದ ಉಗ್ರವ್ರತ. 'ನಿನ್ನವರ ನಿಂದೆಯಿಂ ಕೇಳಿಸದಿರೆಲೆ ದೇವ, ಭಕ್ತರನೆ ಕಾಣಿಸೈ ನೀನೆನ್ನ ಕಂಗಳಿಗೆ, ಭಕ್ತ ವಚನಗಳಂ ಕೇಳಿಸೈ ಕಿವಿಗಳಿಗೆ' ಎಂಬುದು ಆತನ ದಿನನಿತ್ಯದ ಪ್ರಾರ್ಥನೆ. 'ಶಿವದೋ' ಎಂದವರನ್ನು ರಕ್ಷಿಸುವುದಕ್ಕಾಗಿ ಮತ್ತು ಪರವಾದಿಗಳನ್ನು ಶಿಕ್ಷಿಸುವುದಕ್ಕಾಗಿ ಅವನು ಸದಾ ಒಂದು ಪರಶುವನ್ನು ತನ್ನ ಬಳಿ ಇರಿಸಿಕೊಂಡಿದ್ದ. ಅದು ಸಾಕ್ಷಾತ್ ವೀರಭದ್ರನೇ ಮಾಡಿದ್ದೋ ಎಂಬಂತೆ ಭಯಂಕರವಾಗಿತ್ತು.

ಒಂದು ದಿನ, 'ನೀಳದ ಬೊಟ್ಟನಿಟ್ಟ' ವೈಷ್ಣವನೊಬ್ಬನು ಇವನಿಗೆ ಎದುರಾದನು. ಇರಿಭಕ್ತ ನಾಮವನ್ನು ಅಳಿಸಿ ವಿಭೂತಿ ಧರಿಸಲು ಹೇಳಿದ. ಆತ ನಿರಾಕರಿಸಿದ್ದಲ್ಲದೆ, ಶಿವನಿಂದೆ ಮಾಡಿದ. ಸಹಿಸದ ಇರಿಭಕ್ತ ಪರಶುವಿನಿಂದ ಅವನ ತಲೆಯನ್ನು ತರಿದ. ವಿಷ್ಣುಭಕ್ತನ ಬಂಧುಗಳು ದೊರೆಯಲ್ಲಿ ದೂರಿದರು. ದೊರೆ ಭಕ್ತನನ್ನು ಕರೆಸಿ ವಿಚಾರಿಸಿದ. 'ವಿಭೂತಿಇಟ್ಟುಕೊಳ್ಳಲು ಒಪ್ಪದವರನ್ನು ಕಡಿದು ಹಾಕುವುದೇ ನನ್ನ ನೇಮ' ಎಂದು ವಿವರಿಸಿದ. 'ವಿಭೂತಿ ಹಚ್ಚದವರನ್ನು ಕೊಲ್ಲುವುದೇ ನಿನ್ನ ನೇಮವಾದರೆ ನಿನ್ನ ವಿಭೂತಿ ಹಚ್ಚಿ ಈ ಸತ್ತವನನ್ನು ಬದುಕಿಸುವೆಯಾ? ಎಂದು ದೊರೆ ಪ್ರಶ್ನಿಸಿದ. 'ಇವನ ಬಂಧುಬಾಂಧವರೆಲ್ಲ ಶಿವಭಕ್ತರಾದರೆ ಸಾಧ್ಯ'ವೆಂದ. ಅವರೆಲ್ಲ ಒಪ್ಪಿದರು. ಇರಿಭಕ್ತ ವಿಭೂತಿಹಚ್ಚಿ ಸತ್ತವ್ಯಕ್ತಿಯನ್ನು ಬದುಕಿಸಿದ.

ಒಂದು ದಿನ ಶಿವಗಾಮಿ ಎಂಬ ಶಿವಭಕ್ತನೊಬ್ಬ ಶಿವಪೂಜೆಗೆಂದು ಹೂ-ಬುಟ್ಟಿಯನ್ನು ಹಿಡಿದು ರಾಜಮಾರ್ಗದಲ್ಲಿ ಬರುತ್ತಿದ್ದಾಗ, ರಾಜನ ಅರಮನೆಗೆ ಸೇರಿದ ಆನೆಯೊಂದು ಮದಗೊಂಡು ಆತನ ಕೈಯಲ್ಲಿದ್ದ ಹೂ ಬುಟ್ಟಿಯನ್ನು ಕಿತ್ತೆಸೆದು, ಹೂಗಳನ್ನು ಹೊಸಕಿಹಾಕಿತು. ಶಿವಗಾಮಿ 'ಶಿವದೋ ಶಿವದೋ' ಎಂದು ಮೊರೆಯಿಟ್ಟ. ತಕ್ಷಣವೇ ಧಾವಿಸಿದ ಇರಿಭಕ್ತ ತನ್ನ ಪರಶುವಿನಿಂದ ಆನೆಯನ್ನು ತುಂಡರಿಸಿದ. ಸುದ್ದಿ ದೊರೆಯ ಕಿವಿಗೆ ತಲುಪಿ, ಪಗಲ್ಚೋಳರಾಯ ಇರಿಭಕ್ತನಿದ್ದೆಡೆಗೆ ಬಂದು, 'ಭೃತ್ಯಾಪರಾಧಕ್ಕೆ ಸ್ವಾಮಿಯೇ ದಂಡನಾರ್ಹ. ನನ್ನ ಆನೆ ಮಾಡಿದ ತಪ್ಪಿಗೆ ನಾನೇ ಹೊಣೆ. ನನ್ನನ್ನೂ ನಿಮ್ಮ ಪರಶುವಿನಿಂದ ಶಿಕ್ಷಿಸಿರಿ' ಎಂದು ತಲೆಯೊಡ್ಡಿದ. ಇದನ್ನು ಕಂಡು ಇರಿಭಕ್ತನಿಗೆ 'ಇಂತಹ ಪರಮ ಶಿವಭಕ್ತನಿಗೆ ನಾನು ನೋವುಂಟುಮಾಡಿದೆನಲ್ಲಾ?' ಎಂದು ದುಃಖಿಸಿ ತನ್ನನ್ನೇ ಇರಿದುಕೊಳ್ಳಲು ಪರಶುವೆತ್ತುತ್ತಾನೆ. ಪರಶಿವ ಪ್ರತ್ಯಕ್ಷನಾಗಿ ತಡೆಯುತ್ತಾನೆ. ದೊರೆಯ ಆನೆ ಬದುಕುತ್ತದೆ. ಇರಿಭಕ್ತ ಗಣಪದವಿ ಪಡೆಯುತ್ತಾನೆ.

ಇರಿಭಕ್ತ ತನ್ನ ವರ್ತನೆಯಿಂದ ಉಜ್ವಲ ಮತಾಭಿಮಾನಿ ಎನಿಸಿಕೊಳ್ಳುವುದಕ್ಕಿಂತ ಹೆಚ್ಚಾಗಿ 'ಮತಾಂಧ' ಎನಿಸಿಕೊಳ್ಳುತ್ತಾನೆ. ತನ್ನ ಧರ್ಮದವರಲ್ಲದವರನ್ನು ಕೊಲ್ಲುವುದು ಧರ್ಮವೇ? ಕೊಲ್ಲುವುದು ಶರಣಧರ್ಮಕ್ಕೆ ವಿರುದ್ಧವಾದುದ್ದಲ್ಲವೇ? ವಿಷ್ಣುಭಕ್ತನನ್ನು ಕೊಂದು, ಬಂಧುಗಳು ಶಿವಭಕ್ತರಾಗಿ ಮತಾಂತರಿಗಳಾಗಲು ಒಪ್ಪಿದಾಗ ಬದುಕಿಸಿ ಪವಾಡ ಮೆರೆಯುವುದರಲ್ಲಿ ಔಚಿತ್ಯವೇನಿದೆ ಎಂಬ ಪ್ರಶ್ನೆಗಳು ಓದುಗರಲ್ಲಿ ಉದಿಸುತ್ತವೆ. ತನ್ನದಲ್ಲದ ಧರ್ಮದವರನ್ನು ಕುರಿತ 'ಸಹಿಷ್ಣುತೆ' ಇವನಲ್ಲಿ ಇಲ್ಲ. ಹಿಂಸಾಸ್ವರೂಪವಾದ ಭಕ್ತಿ ಈತನದು. 'ಧರ್ಮವೆಂಬುದು ಮನುಷ್ಯನ ಅಫೀಮು' ಎಂಬ ಕಾರ್ಲ್‌ಮಾರ್ಕ್ಸ್‌ನ ಹೇಳಿಕೆ ನೆನಪಿಗೆ ಬರುವುದು ಇಂಥ ಸಂದರ್ಭಗಳಲ್ಲಿ, ಹರಿಹರನ ರಗಳೆಯ ಕೆಲವು ಪಾತ್ರಗಳಲ್ಲಿ ಮಾನವೀಯ ಅಂಶಗಳು ಕಡಿಮೆ.

ಹರಿಹರ ಚಿತ್ರಿಸುವ ರಗಳೆಯ ಕಥಾನಾಯಕರು ಸಾಮಾನ್ಯವಾಗಿ ಅರ್ಪಣಾ ಮನೋಭಾವದವರು. ಶಿವಸಾನಿಧ್ಯ ಸೇರಲು ತೀವ್ರ ತವಕ ಇರುವವರು. ನಿರಪೇಕ್ಷ ಭಕ್ತಿಯುಳ್ಳವರು. ಆದರೆ ನಂಬಿಯಣ್ಣಪಾತ್ರದಲ್ಲಿ ಈ ಬಗೆಯ ಭಾವವನ್ನು ಕಾಣುವುದು ಕಷ್ಟ. ಈತನ ಭಕ್ತಿ ಅಪೇಕ್ಷೆಯಿಂದ ಕೂಡಿದುದು. ಅರ್ಪಣಾಮನೋಭಾವ, ಶಿವನನ್ನು ಸೇರಬೇಕೆಂಬ ಹಂಬಲ ಇಲ್ಲ. ಅವನ ಪ್ರಾರ್ಥನೆಗಳಲ್ಲಿ, ಕೋರಿಕೆಗಳಲ್ಲಿ ಮಾತ್ರ ಭಕ್ತಿಯ ಭಾವ ತುಂಬಿರುವುದು ಕಾಣುತ್ತದೆ. ಎರಡೂ ಕಣ್ಣುಗಳನ್ನು ಕಳೆದುಕೊಂಡ ಸಂದರ್ಭದಲ್ಲಿ ಏಕಾಮ್ರನಾಥನಲ್ಲಿಗೆ ಬಂದ ನಂಬಿಯಣ್ಣ-

ದೇವ ಜನ್ಮ ವಿದೂರ ಜಗದೇಕಚಕ್ಷುವೇ
ದೇವ ಕಮಲಜಶಿರೋಧರ ಮಹಾಭಿಕ್ಷುವೇ
...............................................

ಕರುಣಾಕರ ನಿರೋಧವನುಡುಗಿಸೆಲೆ ಶಿವನೆ" (ನಂಬಿರ. ಸ್ಥಲ ೧೫. ಸಾಲು ೭-೨೪)
ಎಂಬ ಬೇಡಿಕೆಯಲ್ಲಿ ಭಕ್ತಿಭಾವ ತುಂಬಿರುವುದನ್ನು ಕಾಣಬಹುದು. ಇದಲ್ಲದೆ, ಚೇರಮನ ನಾಡಿಗೆ ಹೋಗಿ ಅಲ್ಲಿ ತಿರುವಂಜಕಳನಾಥನನ್ನು ಪ್ರಾರ್ಥಿಸುವ ಸಂದರ್ಭ, ಪಂಗುನಿ ತಿರುನಾಳಿಗೆ ಸಂಪತ್ತನ್ನು ಸಂಗ್ರಹಿಸಲು ತಿರುನಾಗಪಟ್ಟಣಕ್ಕೆ ಬಂದ ನಂಬಿಯಣ್ಣ ಅಲ್ಲಿ ದೇವಾಲಯದ ಮುಂದೆ ನಿಂತು ಶಿವನನ್ನು ಪ್ರಾರ್ಥಿಸುವ ಸಂದರ್ಭಗಳಲ್ಲಿ ನಂಬಿಯಣ್ಣನ ಭಕ್ತಿಭಾವ ಪ್ರಕಟಗೊಳ್ಳುತ್ತದೆ.

ಹರಿಹರ ಕವಿ ತನ್ನ ರಗಳೆಗಳಲ್ಲಿ ಚಿತ್ರಿಸಿದ ಸ್ತ್ರೀ ಪಾತ್ರಗಳು ಅನೇಕ ಹಾಗೂ ಅಪರೂಪದವುಗಳು. ಅವನು ಸ್ತ್ರೀಯರನ್ನು ಪರಿಭಾವಿಸಿರುವ ರೀತಿ, ಸ್ತ್ರೀಯರಿಗೆ ಇತ್ತ ಸ್ಥಾನಮಾನಗಳ ಬಗ್ಗೆ ವಿವೇಚಿಸುವ ಒಂದು ಕಿರುಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಇಲ್ಲಿ ತಮ್ಮ ವೈಯಕ್ತಿಕ ಶಕ್ತಿ ಸಾಮರ್ಥ್ಯ ಹಾಗೂ ಸತ್ವದಿಂದ ಬಾಳಿನಲ್ಲಿ ಗುರಿಯನ್ನು ಮುಟ್ಟಿದ ಕಾರಿಕಾಲಮ್ಮೆಯಿಂಥವರಿದ್ದಾರೆ. ತಮ್ಮ ಪತಿಯ ಯಶಸ್ಸಿಗೆ, ಸಾಧನೆಗೆ ನೆರವಾಗಿ ಎಲೆಮರೆಕಾಯಿಯಂತಾದ ತಿರುನೀಲಕಂಠರ ಪತ್ನಿ ಮುತ್ತೈದೆ, ಇಳೆಯಾಂಡಗುಡಿಮಾರರ ಪತ್ನಿ, ಇಹಃಪಗೆಯಾಂಡರ ಪತ್ನಿ ಪತಿಹಿತವೆ ಇದ್ದಾರೆ. ಪರವೆನಾಚಿ, ಸಂಕಿಲಿನಾಚಿ ಮುಂತಾದ ಸ್ತ್ರೀ ಪಾತ್ರಗಳೂ ಇದ್ದಾವೆ. ನಿಬಂಧದ ಮಿತಿಯ ಹಿನ್ನೆಲೆಯಲ್ಲಿ ಕೆಲವು ಸ್ತ್ರೀಪಾತ್ರಗಳ ಬಗ್ಗೆ ಮಾತ್ರ ವಿವೇಚಿಸಲಾಗುವುದು. ಮಾಣಿಕಶೆಟ್ಟಿಯ ಪತ್ನಿಯಾದ ಕಾರಿಕಾಲಮ್ಮೆ ಯಾರಿಗೂ ತಿಳಿಯದಂತೆ ಗುಪ್ತವಾಗಿ ಶಿವಾರ್ಚನೆ ಮಾಡಿಕೊಂಡು, ಅತ್ತೆ ಮಾವ ಗಂಡನ ಅಧೀನೆಯಾಗಿ, ತನ್ನ ನಿತ್ಯದ ಕೆಲಸಕಾರ್ಯಗಳನ್ನು ಮಾಡಿಕೊಂಡಿರುತ್ತಾಳೆ. ಗುಪ್ತಭಕ್ತರಾಗಿರ ಬೇಕೆಂಬ ಸ್ಥಿತಿ ಅಂದಿನ ಸಾಮಾಜಿಕ ಆರ್ಥಿಕ ಒತ್ತಡದ ಕಾರಣದಿಂದ ಎನ್ನಿಸುತ್ತದೆ. ತನ್ನ ಗುಪ್ತಭಕ್ತಿಯು ಶಿವನ ಪರೀಕ್ಷೆಯಿಂದಾಗಿ ಗಂಡನಿಗೆ ತಿಳಿದಾಗ ಅವಳಿಗೆ ತುಂಬ ದುಃಖವಾಗುತ್ತದೆ.

ಗಂಡನಿಂತಹೆತನಿನ್ನೀನೆಂದು ಕರಗಿದಳು
ದೇವಭಕ್ತಿಯನಿಂತು ಗಾಃ ಮಾಡಿದೆ ತಂದೆ
ದೇವ ಮೀಸಲ ಮೋಹವಂ ಸೂಸಿದೈ ತಂದೆ
ಭಕ್ತಿ ಬೀಸರವಾಯಿತಿನ್ನೆಂತು ಸೈರಿಪೆಂ

(ಪುಟ ೧೦೧, ಸಾಲ೧೫೦-೧೫೩)

ಎಂದುಕೊಂಡು ಇನ್ನು ಅಂಜುವುದೇಕೆ ಎಂದು, ಭಸ್ಮವನ್ನು ಪೂಸಿಕೊಂಡು, ರುದ್ರಾಕ್ಷಿ ಧರಿಸಿಕೊಂಡು ಕೈಲಾಸಪುರದತ್ತ ಸಾಗಿದಳು. ದಾರಿಯಲ್ಲಿ ಪಾಪಿಗಳಿಗೆ ಸುಂದರಿಯಾಗಿ, ಪಾಪವಿಲ್ಲದ ಜನಕ್ಕೆ ತಾಯಾಗಿ ಕಾಣುತ್ತಾ ನಡೆದಳು. ಕಾಮ ಪಿಪಾಸೆಯಿಂದ ಆಕೆಯನ್ನು ಹಿಂಬಾಲಿಸುತ್ತಿದ್ದವರನ್ನು ಕಂಡು ಮರುಗಿ ಕಾರಿಕಾಲಮ್ಮೆ ಶಿವನನ್ನು ಕೇಳಿಕೊಂಡು ಸ್ಥೂಲದೇಹವನ್ನು ತ್ಯಜಿಸಿ ಅಸ್ಥಿಪಂಜರವಾಗಿ ನಿಲ್ಲಲು, ಜನರು ಹೆದರಿ ಓಡಿ ಹೋಗುತ್ತಾರೆ. ನಂತರ ಕಾರಿಕಾಲಮ್ಮೆ ಕೈಲಾಸಮುಖಿಯಾಗಿ ತಲೆಕೆಳಗೆ ಕಾಲು ಮೇಲಾಗಿ ನಡೆಯುತ್ತಾಳೆ. ಹಾಗೂ ಶಿವಸಾನಿಧ್ಯ ಪಡೆಯುತ್ತಾಳೆ.

"ಕಾರಿಕಾಲಮ್ಮೆಯ ಕಥೆ ಶಿವಭಕ್ತಿಗಾಗಿ ಹಠಸಾಧನೆಯನ್ನು ಮಾಡಿದ ಭಕ್ತೆಯೊಬ್ಬಳನ್ನು ಚಿತ್ರಿಸುತ್ತದೆ. ಇವಳ ಕಥೆಯಾಗಲಿ ಅಥವಾ ಅಕ್ಕಮಹಾದೇವಿಯ ಕಥೆಯಾಗಲಿ ಪವಾಡಗಳನ್ನು ಹೊರತುಪಡಿಸಿ ನೋಡಿದಾಗ, ಸ್ತ್ರೀಯು ತನ್ನ ದೇಹದ ಕಾರಣದಿಂದ ಪುರುಷರು ಎದುರಿಸುವುದಕ್ಕಿಂತ ಒಂದು ಹೆಚ್ಚುವರಿ ಪರೀಕ್ಷೆಯನ್ನು ಎದುರಿಸಬೇಕಾಗಿತ್ತು ಎಂಬ ಅಂಶವನ್ನು ಬೆಳಕಿಗೆ ತರುತ್ತದೆ".[೩೦]

ಮಯ್ಯೆಲ್ಲ ಎಲುವಾಗಿ ತಲೆಯೂರಿ ನಡೆದು ಬರುತ್ತಿದ್ದ ಅಮ್ಮೆಯನ್ನು ನೋಡಿ ಪಾರ್ವತಿದೇವಿಯೂ ನಡುಗುತ್ತಾಳೆ. ಬೆದರಿ, ಶಂಕರನ ಅಪ್ಪಿದಳು, 'ದೇವಾ ಇದೊಂದು ಮರುಳು, ಈ ಬಂದುದು, ನನಗೆ ಹೆದರಿಕೆಯಾಗುತ್ತಿದೆ' ಎನ್ನುತ್ತ ಅವನನ್ನು ಬಿಗಿದಪ್ಪಿಕೊಂಡಳು. ಹರಿಹರ ಚಿತ್ರಿಸಿರುವ ಈ ಪ್ರಸಂಗದಲ್ಲಿ ಸೂಕ್ಷ್ಮವಾಗಿ

೩೦. ಅಡಿಟಿಪ್ಪಣಿ ೨೮ ರಂತೆ. ಪುಟ ೧೬೧.

ಪಾರ್ವತಿದೇವಿಯ ಪಾತ್ರವನ್ನು ಗಮನಿಸಿದಾಗ ಈಕೆ ದೈವವಾದರೂ ಮಾನವರಿಗಾಗುವಂತೆ ಆಕೆಗೂ ಭಯವಾಗುವುದನ್ನು ನೋಡಿದರೆ, ಮಾನವ ಲಕ್ಷಣಗಳನ್ನು ಮೀರಲಾಗಿಲ್ಲ ಎಂಬುದು ತಿಳಿಯುತ್ತದೆ. ಪೆರಿಯ ಪುರಾಣದಲ್ಲಿ ಕಾರಿಕಾಲಮ್ಮೆಯ ಪಾತ್ರ ಇದೇ ರೀತಿ ಚಿತ್ರಣಗೊಂಡಿದೆ.

ಇಹಃಪಗೆಯಾಂಡರ ಪಟ್ಟದ ರಾಣಿ ಪತಿಹಿತವೆ ಈಕೆಯಷ್ಟೇ ಅಲ್ಲದೆ ಇನ್ನೂ ಅನೇಕ ಜನ ಸ್ತ್ರೀಯರೂ ಇಹಃಪಗೆಯಾಂಡರಿಗೆ ಪತ್ನಿಯರಾಗಿದ್ದರು. ಶಿವಭಕ್ತರಿಗೆ ಏನನ್ನು ಬೇಕಾದರೂ ಕೊಡುವ ಮಹಾದಾನಿ ಎಂದು ಪ್ರಸಿದ್ಧರಾಗಿದ್ದವರು ಇಹಃಪಗೆಯಾಂಡರು. ಇಂಥವರನ್ನು ಒಮ್ಮೆ ಶಿವನು ಪರೀಕ್ಷೆ ಮಾಡಲು ವಿಟವೇಷವನ್ನು ಧರಿಸಿ ಬಂದು ಆತನ ಪತ್ನಿಯನ್ನೇ ಬೇಡುತ್ತಾನೆ. ಆಕೆ ಒಪ್ಪುತ್ತಾಳೆ. ಒಂದಿನಿತೂ ವಿಚಲಿತಳಾಗುವುದಿಲ್ಲ. ಸುತ್ತಮುತ್ತಲಿನ ಜನ ಆಕೆಯನ್ನು ಜರಿದರು ಅದಾವುದನ್ನು ಗಣಿಸದೆ ದಿಟ್ಟೆಯಾಗಿ ಹೊರಟು ಗಂಡನ ವ್ರತಕ್ಕೆ ಭಂಗಬಾರದಂತೆ ನಡೆದುಕೊಳ್ಳುತ್ತಾಳೆ. ಕೊನೆಗೆ ಬಂದವರು ದೇವರೆಂದು ತಿಳಿಯುತ್ತದೆ. ಪತಿಹಿತನೆ ನೋಡು 'ದೇವರಿವರೆ' ಎಂದಾಗ ಇಹಃಪಗೆಯಾಂಡ 'ಮರುಳೆಮುನ್ನಾರೆಂದು ಕೊಟ್ಟೆ' ಎನ್ನುತ್ತಾನೆ. ಪೆರಿಯಪುರಾಣದಲ್ಲಿ ಪತಿಯಮಾತನ್ನು ಕೇಳಿ ಪತಿಹಿತವೆಗೆ ಮನಕಲಕಿದಂತಾಗುತ್ತದೆಂದು ಚಿತ್ರಿಸಿದ್ದರೆ ರಗಳೆಯಲ್ಲಿ ಆಕೆಯ ಮನಸ್ಸಿ ನಲ್ಲುಂಟಾದ ಭಾವನೆಗಳ ಬಗ್ಗೆ ಏನನ್ನೂ ಚಿತ್ರಿಸಿಲ್ಲ. "ಹೆಂಡತಿಯನ್ನು ಒಂದು ಭೋಗವಸ್ತುವಿನಂತೆ(ದೇವರಿಗಾದರೂ ಸರಿ) ಕೊಡುವ ಅಧಿಕಾರ ಗಂಡನಿಗಿದ್ದ ವಿಷಯವೇ ತೋರಿಸುತ್ತದೆ. ಅದೆಂತಹ ಪುರುಷ ಪ್ರಧಾನ ಮೌಲ್ಯಗಳಿದ್ದ ಸಮಾಜ ಎಂದು. ಪತಿಹಿತವೆಯ ಪಾತ್ರ ಸ್ತ್ರೀ ಅಧೀನತೆಯನ್ನು ಎತ್ತಿ ತೋರಿಸುತ್ತದೆ."[೩೧]

ತಿರುನೀಲಕಂಠರ ಪತ್ನಿ ಮುತ್ತೈದೆ. ಪತಿಯ ನಡತೆಯ ಬಗ್ಗೆ ಶಂಕಿಸಿ 'ಮುಟ್ಟಿದರೆ ಶಿವನಾಣೆ' ಎಂದು ಆಣೆ ಇಟ್ಟವಳು. ದಂಪತಿಗಳಿಗೆ ಆಗ ಹದಿನಾರರ ಪ್ರಾಯ. ಹೆಣ್ಣೊಬ್ಬಳಿಗೆ ಹದಿನಾರರ ಪ್ರಾಯದಲ್ಲಿ ಮನಸ್ಸು ಮಾಗಿರುವುದಿಲ್ಲ. ತಾಳ್ಮೆಯಿಂದ ವಿಚಾರಿಸುವ ವಿವೇಕ ಇರುವುದಿಲ್ಲ. ದುಡುಕಿ ಸಹಜವಾಗಿಯೇ ಆಣೆ ಇಟ್ಟಳು. ಆದರೆ ತಾನೂ ಆ ಶಿಕ್ಷೆಯನ್ನು ಅನುಭವಿಸಬಾಕಾಗಿ ಬರುತ್ತದೆ. ತಿರುನೀಲಕಂಠರು ತಮ್ಮ ಭಕ್ತಿಯ ನಿಷ್ಠೆಯನ್ನು ಮೆರೆಯಲು ತನ್ನ ಪತ್ನಿಯ ಕೋಪವೇ ಸಾಧನವಾಗುತ್ತದೆ.

"ಭಾರತೀಯ ಹೆಣ್ಣೊಬ್ಬಳಿಗೆ ಪತಿಯೇ ಪರದೈವ ಪರಗತಿಯಾಗಿರುವಾಗ, ಬಾಳಿನ ಏಕೈಕ ಗುರಿ, ಸಾಧನೆ ಎಲ್ಲಾ ಆಗಿರುವಾಗ, ಆತನ ಸಂಗವಿಲ್ಲದೇ, ಜೀವನ ಕಳೆದುದೊಂದು ಅತ್ಯುಗ್ರ ತಪಸ್ಸೇ ಸರಿ."[೩೨]

ಇಳೆಯಾಂಡಗುಡಿಮಾರನ ಪತ್ನಿಯ ಹೆಸರು ಕಾವ್ಯದಲ್ಲಿ ಕಂಡುಬರುವುದಿಲ್ಲ. ಇರುವುದೆಲ್ಲವನ್ನೂ ಭಕ್ತರಿಗೆ ದಾನಮಾಡಿ, ತಾನೇ ಬೇಡುವ ಸ್ಥಿತಿಗೆ

---

೩೧. ಅಡಿಟಿಪ್ಪಣಿ ೨೮ ರಂತೆ, ಪುಟ ೧೯೩.

೩೨. ವಿವಿಧ ಲೇಖಕರು, ಹರಿಹರ ವಿಚಾರ ಸಂಕಿರಣ. ಪುಟ ೯೪.

ಇಳೆಯಾಂಡಗುಡಿಮಾರ ಬಂದಿದ್ದರೂ, ಗಂಡನ ನಿಷ್ಠೆಗೆ ಅಡ್ಡಿಪಡಿಸಿದವಳಲ್ಲ. ಗಂಡನ ಹೆಜ್ಜೆಯನ್ನು ಅನುಕರಿಸುವವಳು. ಮಧ್ಯರಾತ್ರಿಯಲ್ಲಿ ಬಂದ ಶಿವನಿಗೆ ಊಟ ಬಡಿಸಲು ಆಗ ತಾನೇ ಬಿತ್ತಿರುವ 'ಮೊಳೆಬಿತ್ತ'ನ್ನು ತರುವಂತೆ ಗಂಡನಿಗೆ ತಿಳಿಸುತ್ತಾಳೆ. ಶಿವನಿಗೆ ಉಣಬಡಿಸುತ್ತಾಳೆ. ಮಗ ಸತ್ತಿದ್ದರೂ ಅತಿಥಿಸತ್ಕಾರಕ್ಕೆ ತೊಂದರೆಯಾಗಬಾರದೆಂದು ಮುಚ್ಚಿಟ್ಟ ಮಹಾತ್ಯಾಗಮಯಿ. ಗಂಡನನ್ನು ಅರ್ಥಮಾಡಿಕೊಂಡು ಬದುಕುವ ಸ್ವಭಾವದ ಹೆಂಗಸು. ತನ್ನ ಕರುಳಕುಡಿ ಸತ್ತಿದ್ದರು ತೋರಿಸಿಕೊಳ್ಳದೆ, ಜಂಗಮರಿಗೆ ಊಟ ಬಡಿಸಲು ಮುಂದಾದ ಸಾಧ್ವೀಮಣಿ. ಆದರೆ ಈ ಸ್ತ್ರೀಪಾತ್ರಕ್ಕೆ ಸಲ್ಲಬೇಕಾದ ಗೌರವ ಹರಿಹರನಿಂದಲೂ ದೊರಕಲಿಲ್ಲ.

ಹರಿಹರ ತನ್ನ ಕೆಲವು ರಗಳೆಗಳಿಗೆ ಶರಣೆಯರನ್ನೇ ನಾಯಕಿಯರನ್ನಾಗಿ ಮಾಡಿಕೊಂಡು ಅವರ ಬಗ್ಗೆ ಗೌರವದಿಂದ ಬರೆದಿದ್ದಾನೆ. ಆತನ ಕಾವ್ಯದಲ್ಲಿ ಬರುವ ಅನೇಕ ಸ್ತ್ರೀಯರು ಕೋಮಲೆಯರು, ಮುಗ್ಧೆಯರು, ಮಹಾತ್ಯಾಗಿಗಳು.

"ಹರಿಹರನ ಸ್ತ್ರೀಪಾತ್ರಗಳನ್ನು ನೋಡಿದಾಗ ಅವು ವರ್ತಿಸುವ ರೀತಿಯನ್ನು ಅವನು ಸ್ವಂತ ಒಪ್ಪುತ್ತಾನೋ ಅಥವಾ ಪರಂಪರಾನುಗತ ಚಿಂತನೆಯನ್ನೇ ಪುನರಾವರ್ತಿಸಿದ್ದಾನೋ, ಒಟ್ಟು ಸ್ತ್ರೀ ಪಾತ್ರಗಳಿಗೆ ವಿಶೇಷ ಗಮನ ನೀಡಿದ್ದಾನೆ ಅಂತೇನೂ ಅನ್ನಿಸುವುದಿಲ್ಲ. ತನ್ನ ಕಾಲದ ಮೌಲ್ಯಗಳು ಸ್ತ್ರೀಯರಿಗೆ ಕೊಟ್ಟಿದ್ದಕ್ಕಿಂತ ಹೆಚ್ಚಿನ ಗೌರವವೇನೂ ಹರಿಹರನ ಸ್ತ್ರೀಯರಿಗೆ ಸಿಕ್ಕಿದಂತೆ ಕಾಣುವುದಿಲ್ಲ. ಹರಿಹರ ತನ್ನ ಕಾಲದ ಪುರುಷಪ್ರಧಾನ ಮೌಲ್ಯಗಳನ್ನು ಮೀರುವಲ್ಲಿ ಸಫಲನಾಗಿಲ್ಲ. ಹೆಂಡತಿಯನ್ನು ಆಸ್ತಿಯೆಂದು ಭಾವಿಸುವುದು, ಹೆಣ್ಣಿನ ರೂಪಲಾವಣ್ಯವನ್ನು ವರ್ಣಿಸುವಾಗ ಅವಳೊಂದು ಭೋಗವಸ್ತು ಎಂದು ನೋಡುವುದು, ಬಹುಪತ್ನಿತ್ವದ ವೈಧೀಕರಣ ಇವುಗಳು ಹರಿಹರನಲ್ಲೂ ಒಂದು ಸಹಜ ವಿಷಯವೆಂಬಂತೆ ಬಂದುಬಿಟ್ಟಿವೆ. ಸ್ತ್ರೀ ವಿಷಯಕ್ಕೆ ಬಂದಾಗ ಪರಂಪರಾನುಗತ ದೃಷ್ಟಿಕೋನವನ್ನು ಮೀರಲು ಅಸಮರ್ಥನಾಗುತ್ತಾನೆ ಎಂಬ ಅಂಶ ಹರಿಹರನ ರಗಳೆಗಳನ್ನು ಓದುವಾಗ ಮನಸ್ಸಿಗೆ ಬರುತ್ತದೆ."[೩೩]

ಒಟ್ಟಿನಲ್ಲಿ ರಗಳೆಯ ಸ್ತ್ರೀ ಪಾತ್ರಗಳು ಪುರುಷಾಧೀನವಾಗಿದ್ದುಕೊಂಡು ಸ್ವತಂತ್ರ ವ್ಯಕ್ತಿತ್ವವಿಲ್ಲದಂತೆ ಕಾಣುತ್ತವೆ. ಆದರೆ ಹರಿಹರ ಮಹಿಳೆಯರನ್ನು ತನ್ನ ಕಾವ್ಯದ ಕಥಾನಾಯಕಿರನ್ನಾಗಿ ಮಾಡಿಕೊಂಡದ್ದು ಒಂದು ಕ್ರಾಂತಿಕಾರಕ ಅಂಶವೇ.

ರಗಳೆಗಳಲೂ ಶರಣಧರ್ಮಕ್ಕೆ ವಿರುದ್ಧವಾದ ಅನೇಕ ಅಂಶಗಳನ್ನು ಕಾಣಬಹುದು. ಇಲ್ಲಿ ಲಿಂಗಭೇದ, ಜಾತಿಭೇದದ ಅಂಶಗಳೂ ಇವೆ. ಹಿಂಸೆ, ಕ್ರೌರ್ಯ ಎಲ್ಲವೂ ಇದೆ. ಕಾರಿಕಾಲಮ್ಮೆಯ ರಗಳೆಯಲ್ಲಿ ಪಾರ್ವತಿ ಅಮ್ಮೆಯ ಅಸ್ಥಿಪಂಜರದ ರೂಪವನ್ನು ನೋಡಿ ಹೆದರಿಕೊಳ್ಳುತ್ತಾಳೆ. ದೈವವಾದರೂ ಮಾನವ ಲಕ್ಷಣವನ್ನು ಪಾರ್ವತಿ ಮೀರಿಲ್ಲ ಎಂಬ ಅಂಶ ಒಂದು ಕಡೆ ಇದ್ದರೆ, ಮುಖ್ಯವಾಗಿ ಪಾರ್ವತಿ ಹೆಣ್ಣು ಎನ್ನುವ ಕಾರಣಕ್ಕೆ ಭಯವಾಗಿದೆ. ಶಿವ ಗಂಡು ಆ ಕಾರಣಕ್ಕಾಗಿ

---

೩೩. ಅಡಿಟಿಪ್ಪಣಿ ೩೦ ರಂತೆ, ಪುಟ ೧೯೮-೧೯೯

ಆತನಿಗೆ ಭಯವಾಗಿಲ್ಲ. (ಶಿವದೈವ ಎನ್ನುವ ಕಾರಣ ಆ ಕಡೆಗೆ ಇರಲಿ) ಕಣ್ಣಪ್ಪ, ತಿರುನಾಳ್ಪೋವರ ರಗಳೆಯಲ್ಲಿ ಜಾತಿ ಭೇದದ ಅಂಶವಿರುವುದನ್ನು ಗಮನಿಸಬೇಕು. ಒಲಘಾಂಡ ಮೂರ್ತಿಗಳ ಕಥೆಯಲ್ಲಿ ಹಿಂಸೆಯನ್ನು, ಇರಿಭಕ್ತ, ಚಂಢೇಶ ಪಿಳ್ಳೆಗಳ ರಗಳೆಯಲ್ಲಿ ಕ್ರೌರ್ಯವಿರುವುದನ್ನು ಗಮನಿಸಬಹುದು.

ಹರಿಹರನ ರಗಳೆಗಳಲ್ಲಿ ಬಹಳ ಮುಖ್ಯವಾಗಿ ಕಾಣಬರುವ ಗುಣವೆಂದರೆ ಭಕ್ತಿ ಆದರೆ ಅದೆಂತಹ ಭಕ್ತಿ ಎಂಬ ಪ್ರಶ್ನೆ ಕೆಲವು ರಗಳೆಗಳನ್ನು ಅಧ್ಯಯನ ಮಾಡಿದಾಗ ತಿಳಿಯುತ್ತದೆ. ಉದಾಹರಣೆಗೆ ಇಹಃಪಗೆಯಾಂಡರ ರಗಳೆಯಲ್ಲಿ ಪತ್ನಿಯನ್ನು ಭಕ್ತ ನೊಟ್ಟಿಗೆ ಕಳುಹಿಸುವುದು, ಚಂಡೇಶಪಿಳ್ಳೆಯ ರಗಳೆಯಲ್ಲಿ ತಂದೆಯನ್ನೇ ಕೊಲ್ಲುವುದು, ಇತ್ಯಾದಿ.

ಏನೇ ಆಗಲಿ, ರಗಳೆಗಳಲ್ಲಿ ಮೇಲ್ಕಾಣಿಸಿದ ಇಂಥ ಅಂಶಗಲು ಕಂಡುಬಂದಾಗ್ಯೂ ಇವುಗಳನ್ನು ಹೊರತುಪಡಿಸಿ ನೋಡಿದಾಗ, ಮಾನವನ ಬದುಕು ಹಸನಾಗಲು ಬೇಕಾಗುವ ಬಹಳಷ್ಟು ಅಂಶಗಳನ್ನು ರಗಳೆಗಲು ಹೊರಹೊಮ್ಮಿಸುತ್ತವೆ ಎಂಬುದನ್ನು ಮರೆಯುವಂತಿಲ್ಲ.

ಸನ್ನಿವೇಶ :

ಹರಿಹರನ ಪುರಾತನರ ರಗಳೆಗಳೊಂದಿಗೆ ಶೇಕ್ಕಿಳಾರ್ ಕವಿಯ ಪೆರಿಯಪುರಾಣವನ್ನು ಹೋಲಿಸಿ ನೋಡಿದಾಗ, ರಗಳೆಗಳಲ್ಲಿ ಕಂಡು ಬರುವ ಅನೇಕ ಸನ್ನಿವೇಶಗಲು ಪುರಾಣದಲ್ಲಿ ಕಂಡು ಬುರುವುದಿಲ್ಲ. ಇವುಗಳಲ್ಲಿ ಹಲವು ಹರಿಹರನ ಸ್ವಂತ ಸೃಷ್ಟಿಯಾಗಿವೆ, ಮತ್ತೆ ಕೆಲವು ತಿರುತ್ತೊಂಡತೊಗ್ಯೆ ತಿರು ಅಂದಾದಿ ಇಲ್ಲವೇ ಜನಬಳಕೆಯಲ್ಲಿದ್ದವು. ಉದಾಹರಣಗೆ ಕೆಲವು ಸನ್ನಿವೇಶಗಳನ್ನು ಗಮನಿಸಬಹುದು.

ಇಳೆಯಾಂಡಗುಡಿಮಾರರ ರಗಳೆಯಲ್ಲಿ ನಡುರಾತ್ರಿಯಲ್ಲಿ ವೇಷ ಧರಿಸಿ ಬಂದ ಶಿವನಿಗೆ, ದಂಪತಿಗಲು ಅಡಿಗೆಯನ್ನು ಸಿದ್ದಪಡಿಸಿ ಊಟಕ್ಕೆ ನೀಡುವ ಹೊತ್ತಿಗೆ ಸರಿಯಾಗಿ ಶಿವನ ಕಪಟದಿಂದ ಗುಡಿಮಾರನ ಮಗ ಹಾವು ಕಚ್ಚಿ ಮರಣ ಹೊಂದುತ್ತಾನೆ. ಅತಿಥಿಯ ಊಟಕ್ಕೆ ತೊಂದರೆಯಾಗಬಾರದೆಂದು ಈ ಸುದ್ಧಿಯನ್ನು ಮುಚ್ಚಿಡಿತ್ತಾರೆ. ಈ ಕರುಣಾಪೂರಿತಾ ಸನ್ನಿವೇಶ ಪೆರಿಯಪುರಾಣದಲ್ಲಿ ಇಲ್ಲ. ಸಂಬಿಯಣ್ಣನನ್ನು ಕಾರಣಿಕ ಶಿಶುವೆಂಬುದನ್ನು ತಿಳಿಯಪಡಿಸಲು ಹರಿಹರ ನಿರೂಪಿಸಿರುವ ಮದ್ದಾನೆಯ ಪ್ರಸಂಗ ಶೇಕ್ಕಿಳಾರನಲ್ಲಿ ಕಂಡು ಬುರುವುದಿಲ್ಲ. ಪರವೆ, ನಂಬಿಯಣ್ಣ ಪ್ರೇಮ ಪ್ರಸಂಗವು ಹರಿಹರನಲ್ಲಿ ವಾಸ್ತವ ಎನ್ನುವ ರೀತಿಯಲ್ಲಿ, ನಿರೂಪಿತವಾಗಿದೆ. ನಂಬಿಯಣ್ಣನ ಇನ್ನೋರ್ವ ಪ್ರೇಯಸಿಯಾದ ಸಂಕಿಲಿಯ ಪ್ರಸಂಗ ಹರಿಹರನಲ್ಲಿ ಶೇಕ್ಕಿಳಾರನಿಗಿಂತ ಸ್ವಾರಸ್ಯಕರವಾಗಿ ಮೂಡಿ ಬಂದಿದೆ.

ತಿರುನಾಳಿನ ಖರ್ಚಿಗೆ ಹೊನ್ನನ್ನು ಪಡೆಯಲು ನಂಬಿಯಣ್ಣನು ಮಂತ್ರಿ ತುಂಬುರನ ಸಲಹೆಯಂತೆ ಶಿವಪುರಗಳನ್ನು ಸಂದರ್ಶಿಸಿ ಪಡಿಹೊನ್ನನ್ನು ಪಡೆದು ತಿರುವತ್ತಿಯೂರಿಗೆ ಬರುವನು. ಅಲ್ಲಿನ ದೇವಾಲಯದಲ್ಲಿ ಸಂಕಿಲಿನಾಚಿಯು ಪತಿಯನ್ನು ಬಯಸಿ ಶಿವನಲ್ಲಿ ಪ್ರಾರ್ಥಿಸುತ್ತಿದ್ದಳು. ಅಲ್ಲಿಗೆ ಬಂದ ನಂಬಿ ಆಕೆಯನ್ನು ನೋಡಿದನು. ನಂಬಿಯನ್ನು ಸಂಕಿಲಿಯೂ ನೋಡಿದಳು ಕಣ್ಣು ಕಣ್ಣು ಕಲೆತು 'ಹಳಿಲನೆ ಮನಂ ಬಿರ್ದು ನೆನಹುಡಿಗಿ ನಡೆಗೆಟ್ಟು ಕಂಪಿಸಿ ನಸುಬೆಮರ್ತು ಹೊಸನೋಟಂ ಹೊರಟೆಗುಟ್ಟೆ ಕೈ ತಿಕ್ಕಿ ತಳರದೆ ತಂತಮ್ಮೊಳಪೊಕ್ಕು ರೂಪು ಮಗುಳಲಾರ ನಟ್ಟು ನೋಡುತ್ತಿರಲ್' (ಸ್ಥಲ ೧೨, ಸಾಲು-೫೧-೫೪) ಇದನ್ನು ಕಂಡ ಸಂಕಿಲಿನಾಚಿಯ ಸಖಿಯರು 'ಹೊಸ ಪೂಜೆ ಹಸನಾಯಿತ್ತು' ಎಂದು ತಕ್ಷಣ ಸಂಕಿಲಿನಿಯನ್ನು ಅವಳ ಮನೆಗೆ ಕರೆದೊಯ್ದರು ಎಂದು ಹರಿಹರ ನಿರೂಪಿಸಿದ್ದಾನೆ. ನಂಬಿಯಣ್ಣ ಹಾಗೂ ಪರವೆಯರ ಪುನರ್ಮಿಲನದ ಸನ್ನಿವೇಶಕ್ಕೆ ಎರಡೂ ಕೃತಿಗಳಲ್ಲಿ ಸಾಕಷ್ಟು ಭಿನ್ನತೆ ಇದೆ. ಪೆರಿಯಾಪುರಾಣದಲ್ಲಿ ಮೊದಲಿಗೆ ಪರವೆಯ ಬಳಿಗೆ ಆರೂರನು ತನ್ನ ಪರಿಜನರನ್ನು ಕಳುಹಿಸಿವನು. ಆವರು ಪರವೆಯ ಮುನಿಸನ್ನು ಕಡಿಮೆಗೊಳಿಸಲಾರದೆ ಹಿಂತಿರುಗಿದಾಗ ಆರೂರನು ಲೋಕನೀತಿ ಬಲ್ಲವರನ್ನು ಮತ್ತೆ ಅವಳ ಬಳಿಗೆ ಕಳುಹಿಸುತ್ತಾನೆ, ರಗಳೆಯಲ್ಲಿ, ಪರವೆಯನ್ನು ಮರೆತು ಸಂಕಿಲಿಯ ಜೊತೆ ಮೂರು ವರುಷ ಕಳೆದ ತನ್ನ ವರ್ತನೆಯ ಬಗೆಗೆ ಪೆರವೆಯು ಕೋಪಗೊಂಡಿರುವುದು ಸಹಜವೆಂದು ತಿಳಿದ ನಂಬಿ ಆಕೆಯನ್ನು ಒಲಿಸಿಕೊಳ್ಳಲು ತನ್ನ ಆಪ್ತಮಂತ್ರಿ ತುಂಬುರನ ಜೊತೆ ಚಿನ್ನಾಭರಣಗಳನ್ನು ಕಳುಹಿಸಿಕೊಡುವನು. "ಹರಿಹರ ಸನ್ನಿವೇಶ ಹಾಗೂ ಪಾತ್ರಗಳಿಗೆ ಜೀವತುಂಬಿ ಸಾಮಾನ್ಯ ದೃಶ್ಯವಾಗಿ ಸರಿಯಬಹುದಾಗಿದ್ದುದರಲ್ಲಿ ಅಪೂರ್ವ ಕಲಾಸಂಪತ್ತಿಯನ್ನು ಮೇಳೈಸುವನು: ನಾಟಕೀಯ ದೃಶ್ಯ ಸಂಯೋಜನೆಯಿಂದ ರಾಗಭಾವಗಳ ಪ್ರದರ್ಶನಕ್ಕೆ ಒಳ್ಳೆಯ ಅವಕಾಶ ಕಲ್ಪಿಸುವನು. ದೈವೀಕ ಪ್ರತಿಭೆಯಿರುವ ಕವಿಗೆ ಮಾತ್ರ ಈ ಬಗೆಯ ಸೃಷ್ಠಿ ಸಾಧ್ಯ".[೩೪]

ಪೆರಿಯ ಪುರಾಣದಲ್ಲಿ ಶಿವನು ಸಂಸಾರದಲ್ಲಿ ಸಿಕ್ಕಿ ಬೀಳಲಿದ್ದ ನಂಬಿಯನ್ನು ಅದರಿಂದ ತಪ್ಪಸಲಿಕ್ಕಾಗಿ ವೃದ್ಧ ಬ್ರಾಹ್ಮಣನ ವೇಷವನ್ನು ಧರಿಸಿ ನೇರವಾಗಿ ಮದುವೆಯ ಮಂಟಪಕ್ಕೆ ಬರುವನು. ರಗಳೆಯಲ್ಲಿ ತನ್ನ ಪರಮಭಕ್ತ ನಂಬಿ ಸಂಸಾರದಿಂದ ಕೆಟ್ಟುಹೋಗಲು ಸಿದ್ಧನಾಗಿರುವುದನ್ನು ತಪ್ಪಿಸಲು ಹರಿಹರ ಸೃಷ್ಟಿಸುವ ಸನ್ನಿವೇಶವೊಂದು ಈ ರೀತಿ ಇದೆ.

ಪರವೆಯೊಡನೆ ನಂಬಿಯಣ್ಣನ ಮದುವೆ ನಡೆಯುತ್ತಿರುವ ಮಂಟಪಕ್ಕೆ ಶಿವ ವೃದ್ಧವೇಷ ಧರಿಸಿ ಬಂದು ವಿಚಿತ್ರವಾಗಿ ವರ್ತಿಸತೊಡಗುತ್ತಾನೆ. ತುಪ್ಪದ ಡಬ್ಬದ ಮೇಲೆ ಬಿದ್ದು ತುಪ್ಪವನ್ನೆಲ್ಲ ಚೆಲ್ಲುತ್ತಾನೆ. ಮುದುಕ ಬಿದ್ದುಬಿಟ್ಟನೆಂದು ಕನಿಕರದಿಂದ

---

೩೪. ಎಸ್. ವಿದ್ಯಾಶಂಕರ್, ನಂಬಿಯಣ್ಣ - ಒಂದು ಅಧ್ಯಯನ. ಪುಟ ೪೦೩.

ಅಲ್ಲಿದ್ದವರೆಲ್ಲ ಅವನನ್ನು ಎತ್ತಿ ನಿಲ್ಲಿಸಿದರೆ, ಆ ವೃದ್ಧ ಒಂದೆರಡಡಿ ಇಟ್ಟು ಮತ್ತೆ ಹಳಿಗೆವಟ್ಟಲ ಮೇಲೆ ಬೀಳುತ್ತಾನೆ. ಅದನ್ನು ಒಡೆದು ಮದುವೆ ಮಂಟಪದಲ್ಲಿ ಅಪಶಕುನವೆಸಗುತ್ತಾನೆ. ಜನರೆಲ್ಲ ವೃದ್ಧನ ಕೈಕಾಲು ಹಿಡಿದು ಒಂದು ಮನೆಯೊಳಗೆ ಕೂಡಿಹಾಕಿ ಬೀಗಹಾಕುತ್ತಾರೆ. ಮುದುಕ ಮತ್ತೆ ಮದುವೆ ಮಂಟಪದಲ್ಲಿ ಕಾಣಿಸಿಕೊಳ್ಳುತ್ತಾನೆ. ಕಿಕ್ಕಿರಿದ ಜನರ ನಡುವೆ 'ಈತ ನನ್ನ ತೊತ್ತಿನಮಗ ನರಸಿಂಗಮೊನೆಯರ ಪೆತ್ತ ಮಗನಲ್ಲ ಕೊಂಡು ಸಾಕಿದ ದತ್ತುಪುತ್ರ' ಎಂದು ನಂಬಿಯಣ್ಣನ ವೃತ್ತಾಂತವನ್ನು ತಿಳಿಸುತ್ತಾನೆ. ಆಗ ಜನರೆಲ್ಲ ವೃದ್ಧನನ್ನು ವನದಲ್ಲಿ ಕುಳಿತಿದ್ದ ನಂಬಿಯಣ್ಣನ ಬಳಿಗೆ ಕಳುಹಿಸುತ್ತಾರೆ. ನಂಬಿಯಣ್ಣನ ಬಳಿಗೆ ಪ್ರಮಾಣ ಪತ್ರದೊಂದಿಗೆ ಬಂದ ಶಿವ 'ನನ್ನ ತೊತ್ತಿನ ಮಗನೆತ್ತಾನೆ. ವೃದ್ಧವೇಷದ ಶಿವನ ಮಾತಿನಿಂದ ನಂಬಿಗೆ ಕೋಪ ಉಕ್ಕೇರುತ್ತದೆ. ಕೋಪದಲ್ಲಿ ಅವನನ್ನು ನೂಕಲು ಹೋಗುತ್ತಾನೆ. ಆದರೆ ನೂಕುವ ಮೊದಲೇ ಕೆಳಗೆ ಬಿದ್ದ ಶಿವ, ನಮಃಶಿವಾಯ ಎನ್ನತೊಡಗುತ್ತಾನೆ. ದೂರದ ದಿಣ್ಣೆಯ ಮೇಲೆ ನಿಂತು ಕಣಗಿಲೆ ಸೊಪ್ಪನ್ನು ಕೈಯಲ್ಲಿಡಿದು ನಂಬಿಯ ವೃತ್ತಾಂತ ಸಾರಿ ಅದಕ್ಕೆ ಪ್ರಮಾಣ ಪತ್ರ ಇರುವುದೆಂದು ನುಡಿಯುತ್ತಾನೆ. ವಿಷಯ ನರಸಿಂಗಮೊನೆಯರಿಗೆ ತಿಳಿಯಲು ಅವರು, ನಂಬಿಯಣ್ಣ ತಮ್ಮ ಮಗನಲ್ಲವೆಂದು ಒಪ್ಪಿ ಧರ್ಮ ಹೇಗಿದೆಯೋ ಹಾಗೆ ಮಾಡುವಂತೆ ತಿಳಿಸುತ್ತಾರೆ.

ವೃದ್ಧ ತಿಳಿಸಿದ ಸಾಕ್ಷಿದಾರರನ್ನು ಹುಡುಕಿ ಚತುರಂಗ ಬಲದೊಡನೆ ತಿರುವೆಣ್ಣನಲ್ಲೂರಿಗೆ ನಂಬಿಯಣ್ಣ ಬರುವಷ್ಟರಲ್ಲಿ, ವೃದ್ಧವೇಷದ ಶಿವ ಆ ಹೊತ್ತಿಗೆ ಅಲ್ಲಿಯೇ ಕಾಣಿಸಿಕೊಂಡು ಸ್ಮಶಾನಭಟ್ಟ, ರುದ್ರಭಟ್ಟರನ್ನೆಲ್ಲಾ ಆತ್ಮೀಯವಾಗಿ ಮಾತನಾಡಿಸಿ ತನ್ನ ಪರಿಚಯ ಮಾಡಿಕೊಂಡು ಪಡಿಪತ್ರವನ್ನು ತೆಗೆದು ಓದಿಸುತ್ತಾರೆ. ಪಡಿಪತ್ರದ ಒಕ್ಕಣೆ ವೃದ್ಧ ಹೇಳಿದಂತೆಯೇ ಇತ್ತು. ಇದೆಲ್ಲ ಮೋಸ ಠಕ್ಕು ಎಂದು ನಂಬಿಯಣ್ಣ, ಆ ಪಡಿಪತ್ರವನ್ನು ತೆಗೆದುಕೊಂಡು ಹರಿದುಹಾಕುತ್ತಾನೆ. ಅದಕ್ಕೆ ಶಿವ, ಇದು ಪಡಿಪತ್ರ ಮಾತ್ರ, ಇದರ ಮೂಲ ಪತ್ರವೇ ಬೇರೆ. ಅದನ್ನು ಶಿವಾಲಯದೊಳಗೆ 'ತಮ್ಮರಸಿಯರು ಬಚ್ಚಿಟ್ಟಿದ್ದಾರೆಂದು ತಿಳಿಸಲು, ನಂಬಿಯಣ್ಣ ಆ ಮೂಲ ಪತ್ರವನ್ನು ಕೊಡುವಂತೆ ಶಿವನನ್ನು ಬೇಡುತ್ತಾನೆ. ಆಗ ಶಿವ ಮೂಲಪತ್ರವನ್ನು ತೋರಿಸುತ್ತೇನೆ ಬಾ ಎಂದು ಶಿವಾಲಯಕ್ಕೆ ಕರೆದುಕೊಂಡು ಹೋಗುತ್ತಾನೆ. ಶಿವಾಲಯದೊಳಗೆ ಕಾಲಿಡುತ್ತಿದ್ದಂತೆಯೇ, ಶಿವ ತನ್ನ ನಿಜರೂಪುದೋರುತ್ತಾನೆ. ನಂಬಿಯಣ್ಣನಿಗೆ ಶಿವಜ್ಞಾನ ಉದಯಿಸುತ್ತದೆ.

ಪ್ರಾಪಂಚಿಕ ಭೋಗದಲ್ಲಿ ಮೈಮರೆತಿರುವ ನಂಬಿಗೆ ಶಿವಜ್ಞಾನ ಉದಯಿಸುವಂತೆ ಮಾಡಲು ಹರಿಹರ ಈ ಸನ್ನಿವೇಶವನ್ನು ಸೃಷ್ಟಿಸುವುದರ ಮೂಲಕ ಯಶಸ್ವಿಯಾಗಿದ್ದಾನೆ.

---

ವರ್ಣನೆ :

ಹರಿಹರನಿಗಿಂತ ಮೊದಲಿನ ಕವಿಗಳೂ ಆತನ ನಂತರ ಬಂದ ಸಂಪ್ರದಾಯಬದ್ಧ ಕವಿಗಳು ಕಾವ್ಯಗಳನ್ನು ರಚಿಸುವಾಗ ಕಥೆಗೆ ಅಗತ್ಯವಿರಲಿ ಇಲ್ಲದಿರಲಿ ಸಾಮಾನ್ಯವಾಗಿ ಹದಿನೆಂಟು ವರ್ಣನೆಗಳನ್ನು ತರುತ್ತಿದ್ದರು. ಅಷ್ಟಾದಶ ವರ್ಣನೆಗಳಲ್ಲಿ ಕೆಲವನ್ನು ಮಾತ್ರ ಹರಿಹರ ಅಲ್ಲಿ ಇಲ್ಲಿ ಮಾಡಿರುವುದನ್ನು ಕಂಡರೂ ಅವು ಅಷ್ಟೇನೂ ದೀರ್ಘವಾಗಿಲ್ಲ. ಹರಿಹರ 'ವರ್ಣನಾಚತುರ' ನಾದ ಕವಿಯಾದರೂ ಉಚಿತವೆಂದು ಕಂಡು ಬಂದ ಕಡೆ, ಅಗತ್ಯವಿದ್ದರೆ ಮಾತ್ರ ವರ್ಣಿಸುತ್ತಾನೆ. "ಅಷ್ಟಾದಶ ವರ್ಣನೆಗಳ ಕೃತಿಕ ಸಂಕೋಲೆ ತನ್ನ ನಾಯಕರ ಚಾರಿತ್ರ್ಯ ನಿರೂಪಣೆಯ ಎಡೆಯಲ್ಲಿ ಅನವಶ್ಯವೆಂದು ಕವಿ ಭಾವಿಸಿ ಅವುಗಳತ್ತ ಕಣ್ಣು ಹಾಯಿಸಿದಂತೆ ತೋರುವುದಿಲ್ಲ".[೩೫]

ತಿರುನೀಲಕಂಠರ ರಗಳೆಯಲ್ಲಿ ಗಂಡ ಹೆಂಡರಿಗೆ ಮುಪ್ಪು ಬಂದ ವಿಷಯವನ್ನು ಹರಿಹರ ಕವಿ–

ಆಣೀ ಪಕ್ವಕ್ಕೆ ಬಂದಂತೆ ಬಂದುದು ಮುಪ್ಪು
ಹಣಿ ಹೊಕ್ಕವಯವದೊಳೆಯ್ದೆ ತೀಯಿತು ಮುಪ್ಪು
ಶಿವಭಕ್ತಿ ಸೋಪಾನದಂತೆ ತೆರೆಗಳು ಮಸಗೆ
ಶಿವನಲ್ಲದಾರುಮಿಲ್ಲೆಂಬಂತೆ ತಂದೆ ಸಡುಗೆ
ಭವಿಗಳಂ ನೋಡೆನೆಂಬಂತೆ ಕಣ್ಮಂಜೊಗೆಯೆ

(ಪುಟ-೫, ಸಾಲು ೧೫೭-೧೬೩)

ಪೆರಿಯಪುರಾಣದಲ್ಲಿ ವೃದ್ಧ್ಯಪ್ಯದ ವರ್ಣನೆ ರಗಳೆಯಲ್ಲಿ ರಸವತ್ತಾಗಿಯೂ, ನಾಟಕೀಯವಾಗಿಯೂ ಬಂದಂತೆ ಬಂದಿರುವುದಿಲ್ಲ.
ಯೌವ್ವನವನ್ನು ಕುರಿತಾದ ವರ್ಣನೆ ಹರಿಹರನ ರಗಳೆಗಳಲ್ಲಿ ಮಿತವಾಗಿವೆ. ಚಪಲತೆಗೆ ಆತ ಮಾರುಹೋಗದೆ ಉಚಿತವೆಂದು ಕಂಡುಬಂದ ಕಡೆ ಮಾತ್ರ ವರ್ಣನೆಯನ್ನು ಲಂಬಿಸಿರುವುದನ್ನು ಕಾಣಬಹುದು. ಇವುಗಳಲ್ಲದೆ ಬಾಲ್ಯದ ವರ್ಣನೆ , ಸೌಂದರ್ಯದ ವರ್ಣನೆ, ಪ್ರಣಯದ ವರ್ಣನೆ, ಕಾಳಗದ ವರ್ಣನೆ, ಶಿವನ ಕಪಟವೇಷದ ವರ್ಣನೆ, ಪೂಜಾವರ್ಣನೆ, ಬೇಟೆಯ ವೇಷದ ವರ್ಣನೆಗಳನ್ನು ಮುಖ್ಯವಾಗಿವೆ.

ಸಂಕಿಲಿನಾಚಿಯ ಸೌಂದರ್ಯವನ್ನು ವರ್ಣಿಸುವಾಗ – ಅವಳ 'ಸೌಕುಮಾರ್ಯ' ಕ್ಕೆ ಹೂದೊಡುಗೆ ಹೊರೆಯಾಗಿತ್ತು, ತೋಳುಗಳು ಎಳೆಲಗ್ಗಿಯಂತಿದ್ದವು, "ಬಟ್ಟೆದೊಡೆ" ಗಳಗೆ 'ಬಾಳೆಬಹಿಷ್ಕಾರ' ವಾಗಿತ್ತು, ಪದತಳಕ್ಕೆ ಕೆಂದಾವರೆ ಕರ್ಕಶವಾಗಿತ್ತು, ನಿತಂಬಕ್ಕೆ 'ಪುಳಿನ ಸ್ಥಳ'ವು 'ಪಳಿ'ವಾಗಿತ್ತು– ಎಂದು ಮುಂತಾಗಿ ವರ್ಣಿಸುತ್ತಾನೆ. ಇಲ್ಲಿ ಆಕೆಯ ಸೌಂದರ್ಯವನ್ನು ಬಣ್ಣಿಸುವುದು ಕವಿಯ ಉದ್ದೇಶವೇ ಹೊರತು ಬೇರೆ ಏನೂ ಅಲ್ಲ. ವರ್ಣನೆಗಾಗಿ ವರ್ಣನೆಯನ್ನು

---

೩೫. ಜಿ. ಎಸ್. ಶಿವರುದ್ರಪ್ಪ. (ಸಂ)ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಪುಟ –೨೮೯.

ಹರಿಹರ ಎಲ್ಲೂ ತಂದಿಲ್ಲ ಪಾಂಡಿತ್ಯ ಪ್ರದರ್ಶಿಸಬೇಕೆಂಬ ಹಂಬಲ ಆತನಿಗಿರಲಿಲ್ಲ. ಆ ಕಾರಣಕ್ಕಾಗಿ ಅನವಶ್ಯವಾದ ವರ್ಣನೆಗಳನ್ನು ಮಾಡಲಿಲ್ಲ . ಕಥಾ ಪೋಷಣೆಗೆ ಅಗತ್ಯವೆಂದೆನಿಸಿದರೆ ಮಾತ್ರ ವರ್ಣನೆಗೆ ತೊಡಗುತ್ತಾನೆ. ಹರಿಹರನ ರಗಳೆಗಳು ಹಾಗೂ ಪೆರಿಯಪುರಾಣವನ್ನು ಬೆರಳಿಟ್ಟು ಪ್ರತ್ಯೇಕಿಸಿ ತೋರಿಸಲು ವರ್ಣನೆಗಳು ನೆರವಿಗೆ ಬರುತ್ತವೆ. ತಿರುನಾಳಿನ ವೈಭವದ ವರ್ಣನೆ ಕಣ್ಣಿಗೆ ಕಟ್ಟುವಂತೆ ಹರಿಹರ ವರ್ಣಿಸಿದ್ದಾನೆ. ಪೆರಿಯಪುರಾಣದಲ್ಲಿ ತಿರುನಾಳಿನ ವೈಭವದ ದೃಶ್ಯವಿಲ್ಲ. ಹರಿಹರ ತನ್ನ ಸಂಚಾರ ಕಾಲದಲ್ಲಿ ತಮಿಳುನಾಡಿನ ತಿರುನಾಳಿನ ಸಂಭ್ರಮದ ಆಚರಣೆಯನ್ನು ಕಣ್ಣಾರೆ ನೋಡಿರಬಹುದು ಇದು ಹರಿಹರ ತಮಿಳುನಾಡನ್ನು ಸಂಚರಿಸಿ ವಿಷಯಗಳನ್ನು ಸಂಗ್ರಹಿಸಿದ್ದಾನೆಂದು ಊಹಿಸಬಹುದು.

## ಪವಾಡಗಳು :

ಪುರಾಣಗಳಲ್ಲಿ 'ಪವಾಡ'ಗಳು ಸರ್ವೇಸಾಮಾನ್ಯ. ಪಾತ್ರಗಳ ಅಸಮಾನ್ಯತೆಯನ್ನು ಚಿತ್ರಿಸಲು ಪವಾಡಗಳನ್ನು ಬಳಸಿಕೊಳ್ಳುವುದುಂಟು. 'ಪವಾಡ' ಎಂದರೆ, ಧಾರ್ಮಿಕ ಅಥವಾ ಆಧ್ಯಾತ್ಮಿಕ ಕ್ಷೇತ್ರಕ್ಕೆ ಸೇರಿದ ವ್ಯಕ್ತಿಗಳು ಜನರ ಭಕ್ತಿ ಶ್ರದ್ಧೆಗಳನ್ನು ಗಟ್ಟಿಗೊಳಿಸುವ ಉದ್ದೇಶದಿಂದ ಮತ್ತು ಲೋಕಾನುಕಂಪದಿಂದ, ಪ್ರಾಸಂಗಿಕವಾಗಿ ಪ್ರದರ್ಶಿಸುವ ಕೆಲವು ಅಘಟಿತ ಘಟನೆಗಳು, ನೋಡುವವರಲ್ಲಿ ಆಶ್ಚರ್ಯವನ್ನು ಹುಟ್ಟಿಸುವುದು ಪವಾಡದ ಮೊದಲ ಲಕ್ಷಣ; ದೈನಂದಿನ ಪರಿಚಿತ ಸಂಗತಿಗಳಿಂದ ಭಿನ್ನವಾದ, ನಮ್ಮ ತಿಳುವಳಿಕೆಯ ಮೂಲಮಾನದಿಂದ ಅದರ ಸ್ವರೂಪವನ್ನು ವಿವರಿಸಲಾಗದಂಥ ಒಂದು ವಿಲಕ್ಷಣವಾದ ಅಥವಾ ಅತೀಂದ್ರಿಯ ಸಾಮರ್ಥ್ಯದ ಪರಿಣಾಮ ಅದು."[೩೬]

ಧಾರ್ಮಿಕ ನಾಯಕರುಗಳನ್ನು ಕುರಿತ ಕಥನಗಳಲ್ಲಿ ಪವಾಡಗಳ ಉಲ್ಲೇಖಗಳನ್ನು ಸಮೃದ್ಧವಾಗಿ ಕಾಣಬಹುದು. ಜನರ ಸಂಕಷ್ಟಗಳನ್ನು ನಿವಾರಿಸಲು, ತಮ್ಮ ಮಹಿಮಾನ್ವಿತ ವ್ಯಕ್ತಿತ್ವವನ್ನು ಪ್ರಕಟಿಸಲು, ಇಂಥ ಮಹಾವ್ಯಕ್ತಿಗಳು ಮಾಡಿ ತೋರಿಸಿದ ವಿಶೇಷ ಸಾಮರ್ಥ್ಯಗಳು ಪವಾಡಗಳೆಂದು ಕರೆಯಿಲ್ಪಟ್ಟಿವೆ. ಕನ್ನಡ ಸಾಹಿತ್ಯದ ಮಟ್ಟಿಗೆ, ಪವಾಡಗಳು ಸಾಹಿತ್ಯದಲ್ಲಿ ದಾಖಲಾಗಿರುವುದು ಹನ್ನೆರಡನೆಯ ಶತಮಾನದ ಶಿವಶರಣರಲ್ಲಿ ಕೆಲವರನ್ನು ಕುರಿತು ರಚಿತವಾಗಿರುವ ಕೃತಿಗಳಲ್ಲಿ. ಇಲ್ಲಿ ಪವಾಡಗಳು ಸಮೃದ್ಧವಾಗಿ ಸೇರಿಕೊಂಡಿವೆ. "ಯಾವುದೇ ಮಹಾವ್ಯಕ್ತಿಯನ್ನು ಅವನಲ್ಲಿರಬಹುದಾದ ಶ್ರೇಷ್ಠ ಮಾನವೀಯ ಮೌಲ್ಯಗಳ ಕಾರಣಗಳಿಗಾಗಿ ಗೌರವಿಸುವುದಕ್ಕಿಂತ, ಅವನ ಅಲೌಕಿಕ ಅಪೌರುಷೇಯವೆಂಬಂಥ ಸಾಮರ್ಥ್ಯಗಳಿಗಾಗಿ ಮೆಚ್ಚಿಕೊಳ್ಳುವುದು ಎಲ್ಲ ಕಾಲದ ಜನಸಮೂಹಕ್ಕೆ ಇರುವ ದೌರ್ಬಲವೋ ಲಕ್ಷಣವೋ ಆಗಿದೆ".[೩೭]

೩೬. ಜಿ. ಎಸ್. ಶಿವರುದ್ರಪ್ಪ, (ಸಂ) ಸಾಧನೆ. ಸಂಪುಟ ೧೨, ಸಂಚಿಕೆ ೧, ಪುಟ ೪೬
೩೭ ಅದೇ, ಪುಟ-೪೩

ರಗಳೆಗಳಲ್ಲಿ ಮುಟ್ಟಿದ ಕಡೆಯಲ್ಲೆಲ್ಲಾ ಪವಾಡಗಳು ಕಂಡು ಬರುತ್ತವೆ. ತಿರುನೀಲಕಂಠರ ರಗಳೆಯಲ್ಲಿ ತೊಂಬತ್ತಾರು ವರ್ಷದ ಸತಿ-ಪತಿಗಳು ಲಾತಕೋಲಿನ ತುದಿಯನ್ನು ಹಿಡಿದು ಕೊಳದಲ್ಲಿ ಮುಳುಗಿ ಮೇಲೇಳುವಾಗ ಹದಿನಾರರ ಹರೆಯದವರಾಗುವುದು. ಇಳೆಯಾಂಡಗುಡಿಮಾರರ ರಗಳೆಯಲ್ಲಿ ಹಾವು ಕಡಿದು ಸತ್ತ ಮಗ ತಂದೆ ಕರೆದ ಕೂಡಲೇ ಜೀವ ಪಡೆದು ಬರುವುದು. ಇಱಿಭಕ್ತನ ಕಥೆಯಲ್ಲಿ 'ನೀಲದ ಬೊಟ್ಟನ್ನಿಟ್ಟ' ವೈಷ್ಣವನನ್ನು ಇರಿಭಕ್ತ ಕೊಡಲಿಯಿಂದ ಹೊಡೆದು ಕೊಂದು ನಂತರ ತನ್ನ ಭಸ್ಮದ ಪ್ರಭಾವದಿಂದ ಬದುಕಿಸುವುದು. ಕಣ್ಣಪ್ಪ ದೇವರ ಕಥೆಯಲ್ಲಿ ದೇವರಿಗೆ ತನ್ನ ಎರಡೂ ಕಣ್ಣುಗಳನ್ನು ಕಿತ್ತುಕೊಟ್ಟ ಕಣ್ಣಪ್ಪ ಮತ್ತೆ ತನ್ನ ಕಣ್ಣುಗಳನ್ನು ಪಡೆದುದ್ದು ಪವಾಡವೇ ಚಂಡೇಶಪಿಳ್ಳೆಯ ರಗಳೆಗಳಲ್ಲಿ ಚಂಡೇಶನು ತನ್ನ ತಂದೆ ಅಚ್ಯುತಭಟ್ಟನನ್ನು ಕೊಂದಾಗ. ಶಿವ ಆತನನ್ನು ಮತ್ತೆ ಬದುಕಿಸುವುದು. ಚಂಡೇಶನು ಕೊಳಲ ದನಿಯ ಮೂಲಕ ಗೋವುಗಳನ್ನು ಕರೆಯುವುದು. ಎಲ್ಲಾ ಹಸುಗಳು ಓಡಿಬಂದು ಲಿಂಗದ ಮೇಲೆ ಹಾಲಿನ ಮಳೆಗರೆಯುವುದು ಪವಾಡದ ಚಿತ್ರಣವೇ.

ಕಾರಿಕಾಲಮ್ಮೆಯ ರಗಳೆಯಲ್ಲಿ ಕಂಡು ಬರುವ ಪವಾಡದ ಪ್ರಸಂಗವೊಂದು ಈ ರೀತಿಯಾಗಿದೆ. ಕಾರಿಕಾಲಮ್ಮೆಯ ಪತಿ ಮಾಣಿಕಶೆಟ್ಟಿ ಎರಡು ಅಪರೂಪದ ಮಾವಿನಹಣ್ಣುಗಳನ್ನು ಪತ್ನಿಗೆ ನೀಡಿ ಅತಿ ಸುರಕ್ಷಿತವಾಗಿ ಇವುಗಳನ್ನು ಬೈತಿಡಬೇಕೆಂದು ಹೇಳಿಹೋದ. ಶಿವ ಭಕ್ತನಂತೆ ವೇಷ ಧರಿಸಿಕೊಂಡು ಬಂದು ಕಾರಿಕಾಲಮ್ಮೆಯಿಂದ ಆ ಮಾವಿನಹಣ್ಣುಗಳನ್ನು ಪಡೆದು ಸೇವಿಸಿ ಹೊರಟು ಹೋದ. ವ್ಯಾಪಾರ ಮುಗಿಸಿ ಮನೆಗೆ ಬಂದ ಮಾಣಿಕಶೆಟ್ಟಿಗೆ ಊಟ ಮಾಡುತ್ತಿರುವಾಗ ಆ ಅಪರೂಪದ ಹಣ್ಣುಗಳು ನೆನಪಾಯ್ತು. 'ಹಣ್ಣೆಲ್ಲಿ? ತೆಗೆದುಕೊಂಡು ಬಾ'- ಎಂದಾಗ ಕಾರಿಕಾಲಮ್ಮೆ ನಡುಗಿ ಹೋದಳು. ಒಳಹೋಗಿ ಉಳಿದಿದ್ದ ಒಂದು ಹಣ್ಣನ್ನು ತಂದು ಬಡಿಸಿದಳು. 'ಇನ್ನೊಂದು ಹಣ್ಣೆಲ್ಲಿ? ತೋರಿಸು' ಎಂದಾಗ, ಶೆಟ್ಟಿಯ ಈ ಮಾತುಗಳಿಂದ ಅಮ್ಮೆ ದಿಗ್ಭ್ರಾಂತಳಾದಳು. ಆಕೆ, ಆದುದಾಗಲಿ ಎಂಬ ದೃಢನಿರ್ಧಾರದಿಂದ ಕೈಯೊಂದಿಗೆ ಪ್ರಾಣವನ್ನು ಬೆರೆಸಿ ಹಣ್ಣನ್ನಿಟ್ಟಿದ್ದ ತಾವಿನಲ್ಲಿ ಕೈ ಇರಿಸಲು ತಾನು ಶಿವಭಕ್ತನಿಗೆ ಕೊಟ್ಟ ಹಣ್ಣಿನ ಸ್ಥಾನದಲ್ಲಿ ಮತ್ತೊಂದು ಹಣ್ಣಿರುವುದನ್ನು ಅರಿತು, ಹರುಕ್ಷಿತಳಾಗಿ, ಅದನ್ನೂ ತಂದು ಬಡಿಸಿದಳು. ಆ ದಿವ್ಯ ಫಲವನ್ನು ಮುಟ್ಟಿದುದಕ್ಕೆ ಸೆಟ್ಟಿಯು ರೋಮಾಂಚನಗೊಂಡ. ದೇವನೆ ಬಂದು ಈ ಅಮೃತಫಲವನ್ನು ಇರಿಸಿದ್ದಾನೆ ಎಂಬ ಹೆಂಡತಿಯ ಮಾತುಗಳನ್ನು ಕೇಳಿ ಸೆಟ್ಟಿ ಭಯಗೊಂಡು ಕಾರಿಕಾಲಮ್ಮೆ ತನ್ನ ಸತಿ ಎಂಬ ಭಾವನೆಯನ್ನು ತ್ಯಜಿಸಿದ.

ಈ ಪವಾಡ, ಸೆಟ್ಟಿಗೆ ತನ್ನ ಪತ್ನಿ ಪರಮಭಕ್ತೆ ಎಂಬ ಸತ್ಯ ತಿಳೀಯಲು ಕಾರಣವಾಯ್ತು. ಭಕ್ತರ ಅಸಮಾನ್ಯತೆಯನ್ನು ತಿಳಿಸಲು ಹರಿಹರ ಇಂಥ ಅನೇಕ ಪವಾಡಗಳನ್ನು ತನ್ನ ರಗಳೆಯಲ್ಲಿ ತಂದಿದ್ದಾನೆ.

---

**ಭೂತಗಳು ನೆಲ್ಲನ್ನಡಕಿದ ಪವಾಡದ ಕಥೆ :** ನಂಬಿಯಣ್ಣ ತಿರುವಾರೂರಿನಲ್ಲಿ ಪರವೆ ಜೊತೆಯಲ್ಲಿದ್ದಾಗ 'ಪಂಗುನಿಯ ತಿರುನಾಳ್' ಹಬ್ಬ ಬರುತ್ತದೆ. ಈ ಸಂದರ್ಭದಲ್ಲಿ ಪರವೆಯ ಮನೆತನದವರು ಮಹೇಶ್ವರನನ್ನು ಆರಾಧಿಸುವ ಪದ್ಧತಿ ಇತ್ತು. ಆದರೆ ಮನೆಯಲ್ಲಿ ದವಸವಿಲ್ಲ; ಖರ್ಚಿಗೆ ಹಣವಿಲ್ಲ! ಇದನ್ನು ತಿಳಿದ ನಂಬಿಯು, ತಿರುಕೊಂಡೆಯೂರಿಗೆ ಬಂದು ಶಿವನನ್ನು ಪ್ರಾರ್ಥಿಸಿ ನೆಲ್ಲುಗಳನ್ನು. ಸಾವಿರ ಪಡಿಹೊನ್ನುಗಳನ್ನು ಪಡೆದ. ಆದರೆ ಶಿವಕೊಟ್ಟ ಕೋಟ್ಯಾನುಕೋಟಿ ನೆಲ್ಲನ್ನು ತಿರುವಾರೂರಿಗೆ ಸಾಗಿಸುವವರು ಯಾರು? ಎಂದುಕೊಂಡು ತಿರುಕೊಳಲ್ ಎಂಬ ಶಿವಮಂದಿರಕ್ಕೆ ಬಂದು ಶಿವನನ್ನು ಬೇಡಿಕೊಂಡನು. ನಂಬಿಯ ಬೇಡಿಕೆಯಂತೆ ಶಿವ ತನ್ನ ಭೂತ ಸಂಕುಲಕ್ಕೆ ಅಪ್ಪಣೆಯಿತ್ತ. ಅವು ಶಿವನ ಅಪ್ಪಣೆಯಂಯೆ ತಿರುವಾರೂರಿಗೆ ನೆಲ್ಲನ್ನಡಕಿದವು. ಹೊನ್ನನ್ನು ಹೊರುವುದಕ್ಕೆ ಆಳುಗಳಿಲ್ಲ ಎಂದುಕೊಂಡು ನಂಬಿ 'ತಿರುಮಣಿ ಮುತ್ತಿನಾರ್' ನದಿಯಲ್ಲಿ ಹಾಕುತ್ತಾನೆ, ಆ ಹೊನ್ನುಗಳನ್ನು ತಿರುವಾರೂರಿನ ಕೊಂಡದಲ್ಲಿ ಎತ್ತಿಕೊಳ್ಳೋಣವೆಂಬ ನಿಶ್ಚಯದಿಂದ. ಆರೂರಿಗೆ ಹಿಂದಿರುಗಿದಾಗ ಊರೆಲ್ಲಾ, ಊರಿನ ಬೀದಿಯೆಲ್ಲಾ ನೆಲ್ಲು ಮೂಟೆಗಳಿಂದ ತುಂಬಿಬಿಟ್ಟಿತ್ತು. ಇದನ್ನು ನೋಡಿದ ಸೌಂದರನಂಬಿ ಅವರವರ ಮನೆಯ ಮುಂದಿನ ನೆಲ್ಲನ್ನು ಅವರವರೇ ತೆಗೆದುಕೊಳ್ಳಲಿ ಎಂದು ಸಾರಿದನು. ಎಲ್ಲರೂ ಭತ್ತವನ್ನು ತಮ್ಮ ಮನೆಯೊಳಕ್ಕೆ ತುಂಬಿಕೊಂಡರು. ಅಲ್ಲಿ ನದಿಯಲ್ಲಿ ಹಾಕಿ ಬಂದಿದ್ದ ಹೊನ್ನುಗಳನ್ನು ಇಲ್ಲಿ, ತಿರುವಾರೂರಿನ ಹೊಂಡದಿಂದ ಎತ್ತಿಕೊಂಡು ಬಂದು ಪರವೆಯ ತಾಯಿಗೆ ನಂಬಿಯಣ್ಣ ಅರ್ಪಿಸಿದನು. ಎಲ್ಲರೂ ತಿರುನಾಳನ್ನು ವೈಭವದಿಂದ ಆಚರಿಸಿದರು.

<u>ನಂಬಿಯಣ್ಣನೆಂಬ ಹೆಸರಿನ ಬಾಲಕನನ್ನು ಆರೂರನ್ನು ಬದುಕಿಸಿದ ಪವಾಡದ ಕಥೆ :</u>

ಈ ರೀತಿಯಲ್ಲಿದೆ ಹರಿಹರ ನಿರೂಪಿಸುವಂತೆ ಹಲವು ಪುರದ ಪಡಿಹೊನ್ನನ್ನು ಪಡೆದು ಪೊಕ್ಕುಳಿಯೂರನ್ನು ನಂಬಿ ಪ್ರವೇಶಿಸುತ್ತಿರಲು ಸೂರ್ಯಮುಳುಗುತ್ತಿದ್ದನು. ಸಂಜೆಗತ್ತಲಿನಲ್ಲಿ ನಂಬಿಯು ದೇವಾಲಯಕ್ಕೆ ಬಂದು ಅಲ್ಲಿನ ಶಿವನನ್ನು ಸ್ತುತಿಸಿ ಪಡಿಹೊನ್ನನ್ನು ಪಡೆದು ಕುಳಿತಿರಲು "ನಂಬಿ ನಂಬೀ ಕಂದ ಮೊಸಳೆ ನುಂಗಿತೆ ಮಗನೆ ನಂಬಿಯಣ್ಣನ ಪೆಸರು ಫಲಿಸದಿಂತೆಲೆ ಮಗನೆ" ಎಂಬ ಶೋಕವಾಣಿ ಕೇಳಿ ಏನು ಎತ್ತ ಎಂದು ವಿಚಾರಿಸಲು, ಮೊಸಳೆ ನುಂಗಿದ ಮಗುವಿನ ತಂದೆ-ತಾಯಿಯರಿಂದ ದುಃಖದ ಕಥೆ ತಿಳಿದು ನಿಷ್ಕರುಣಿ ಶಿವನನ್ನು ಕುರಿತು ಸೌಂದರನು "ಅವಿನಾಶಿ ನೀಂ ನಿನ್ನ ಮಕ್ಕಳ್ಗೆ ನಾಶವೇ ಭವನಾಶ ಮಕ್ಕಳಂ ಕೊಲುವುದಭ್ಯಾಸವೇ ಕೊಡುಮಗನನ್" ಎಂದು ಕೋಪಗೊಂಡು ನುಡಿಯುವನು. ಸೌಂದರ ಮುನಿದುದನ್ನು ಕಂಡ ಕಾಲ ಹಾಗೂ ವರುಣರು ದಿಗಿಲುಗೊಂಡು ಕೊಂಡವನ್ನು ಹೊಕ್ಕು ಮಗುವಿನ ಶರೀರವನ್ನು ಹುಡುಕಿ ಅದಕ್ಕೆ ಜೀವವನ್ನು ತುಂಬುವರು. ನಡುನೀರಿನಿಂದ ಮೇಲೆದ್ದು ಮಗು ಗಳಗಳನೆ ನಡೆದು ಬರುವುದು

ನೆಲ್ಲನ್ನು ತಿರುವಾರೂರಿನ ಜನವೆಲ್ಲ ತುಂಬಿಕೊಂಡದ್ದು, ಸತ್ತ ಮಗನನ್ನು ಮತ್ತೆ ಪಡೆಯಲು ಕಾರಣವಾದ ಈ ಪವಾಡಗಳು ಕಥಾನಾಯಕರ ಮಹಿಮೆಯನ್ನು ತಿಳಿಸಲು ಬಳಕೆಯಾಗಿದ್ದರೂ, ಮಾನವೀಯ ಅಂಶಗಳು ಈ ಪವಾಡ ಗಳಲ್ಲಿರುವುದನ್ನು ಗಮನಿಸಬೇಕು.

**ಅಭಿವ್ಯಕ್ತಿ :**

ಕಾವ್ಯವನ್ನು ಜನತೆಯ ಹತ್ತಿರ ಕೊಂಡೊಯ್ಯಬೇಕು ಎಂಬುದು ಹರಿಹರನ ಮಹತ್ವಾಕಾಂಕ್ಷೆಯಾಗಿತ್ತು. ಜನತೆಯ ಭಾಷೆ ಕಾವ್ಯದ ಮಾಧ್ಯಮವಾದರೆ ಮಾತ್ರ ಅದು ಸಾಧ್ಯವೆಂಬುದು ಹರಿಹರನಿಗೆ ತಿಳಿದಿತ್ತು. ಈ ಕಾರ್ಯದಲ್ಲಿ ವಚನಕಾರರು ಆಗಲೇ ಯಶಸ್ಸನ್ನು ಗಳಿಸಿದ್ದಿದು ಹರಿಹರನಿಗೆ ಗೊತ್ತು. ವಚನಕಾರರಿಂದ ಪ್ರಭಾವಿತನಾಗಿ ತಾನೂ ಸರಳವಾದ ಆಡುನುಡಿಯಕನ್ನಡದಲ್ಲಿ ಕಾವ್ಯರಚಿಸಿದ ಸಂಸ್ಕೃತ ಭೂಯಿಷ್ಠವಾದ ಚಂಪೂ ಶೈಲಿಯನ್ನು ಪಕ್ಕಕ್ಕೆ ಸರಿಸಿ 'ದೇಶೀ' ಮಾರ್ಗದಲ್ಲಿ ಕಾವ್ಯ ರಚಿಸತೊಡಗಿದ. ಪಂಪಾದಿ ಜೈನಕವಿಗಳಲ್ಲಿ ಬಳಕೆಯಲ್ಲಿದ್ದ ಸಂಸ್ಕೃತ ಪ್ರಧಾನ ಕಾವ್ಯಶೈಲಿ ಹೋಗಿ ಹರಿಹರನಿಂದ ದೇಶೀ ಪ್ರಧಾನ ಕಾವ್ಯಶೈಲಿ ಬಳಕೆಗೆ ಬಂತು. ವಚನಕಾರರ ಆಶಯವನ್ನು ತನ್ನೊಳಗಿಟ್ಟುಕೊಂಡು ಹರಿಹರ ಕಾವ್ಯದ ವಸ್ತು, ಶೈಲಿ, ಎಲ್ಲಾ ವಿಚಾರಗಳಲ್ಲೂ ಮಾರ್ಪಾಟುಗಳನ್ನು ತಂದ. ಹೊಸಹಾದಿಯನ್ನು ತುಳಿದ. ಹರಿಹರನಲ್ಲಿ ಭಾಷೆ ಆಯಾ ಸಂದರ್ಭಕ್ಕೆ ತಕ್ಕಂತೆ ಬದಲಾವಣೆ ಹೊಂದುತ್ತದೆ. ಅಗತ್ಯವಿದ್ದ ಕಡೆ ಸಂಸ್ಕೃತವನ್ನು, ಹಳಗನ್ನಡವನ್ನೂ ಬಳಸುತ್ತಾನೆ ತಮಿಳು ಮಾತುಗಳ ಪ್ರಯೋಗವನ್ನೂ ಅಲ್ಲಲ್ಲಿ ಕಾಣಬಹುದು. ತಿರುನಾಳ್ಪೋವರ ಕ್ಥೆಯಲ್ಲಿ ತಮಿಳು ಪದಗಳು ಹೆಚ್ಚಾಗಿ ಕಂಡುಬುರುತ್ತವೆ. ತಿರುನೀಲಕಂಠ, ಕಾರಿಕಾಲಮ್ಮೆಯರ ರಗಳೆಯಲ್ಲೂ ಕೆಲವು ತಮಿಳು ಪದಗಳ ಪ್ರಯೋಗವನ್ನು ಕಾಣಬಹುದು.

ಹರಿಹರ 'ರಗಳೆ' ಎಂಬ ಪದ್ಯಜಾತಿಯನ್ನು ತನ್ನ ಕಾವ್ಯದ ಅಭಿವ್ಯಕ್ತಿಗೆ ಬಳಸಿಕೊಂಡ, ಪಂಪ, ಪೊನ್ನ ಮೊದಲಾದವರು ತಮ್ಮ ಕಾವ್ಯಗಳಲ್ಲಿ ಅಲ್ಲಲ್ಲಿ ಈ ಬಗೆಯ ಪದ್ಯಗಳನ್ನು ಬಳಸಿಕೊಂಡಿದ್ದರು. ಇಡೀ ಕಾವ್ಯವನ್ನು ರಗಳೆ ಛಂದಸ್ಸಿನಲ್ಲಿ ರಚಿಸಿ ಕೀರ್ತಿ ಹರಿಹರನಿಗೆ ಸಲ್ಲುತ್ತದೆ. ಅಷ್ಟೇ ಅಲ್ಲ 'ರಗಳೆಯಕವಿ' ಎಂದೇ ಕರೆಸಿಕೊಂಡ. ನಿರರ್ಗಳವಾಗಿ ಕಥೆ ಹೇಳಲು ವೃತ್ತ ಕಂದಗಳು ಹೊಂದುವುದಿಲ್ಲವೆಂದು ಕಂಡು ಕೊಂಡ ಹರಿಹರ ಬೇಗಬೇಗ ಕಥೆ ನಿರೂಪಿಸಲು ರಗಳೆ ಛಂದಸ್ಸು ಸರಿಯೆಂದು ತಿಳಿದುಕೊಂಡ. ಪಾದಗಳ ಸಂಖ್ಯಾನಿಯಮವಿಲ್ಲದ್ದರಿಂದ ಕಥೆಯನ್ನು ಹಿಂಜುವುದಕ್ಕೆ ಇದರಿಂದ ಅವಕಾಶವಾಯಿತು. ಮಂದಾನಿಲ, ಲಲಿತ ಮತ್ತು ಉತ್ಸಾಹ ಈ ಎಲ್ಲಾ ಬಗೆಯ ರಗಳೆಗಳಲ್ಲಿ ಕಾವ್ಯ ರಚಿಸಿದ್ದಾನೆ.

“ಹರಿಹರನ ಶೈಲಿಯ ಮುಖ್ಯ ಲಕ್ಷಣ ಉತ್ಸಾಹ”[೩೮] ರಗಳೆಗಳ ಭಾಷೆ ಚಿಕ್ಕಚಿಕ್ಕ ವಾಕ್ಯಗಳೆಚಿದ ಕೂಡಿ, ಉಚಿತ ವರ್ಣನೆಗಳಿಂದ ಓದುಗರನ್ನು ಸೆಳೆಯುತ್ತದೆ. ಉಗಳೆಯ ಭಾಷಗೆ ಚಿತ್ರಕ ಶಕ್ತಿ ಇದೆ ಎಂಬುದಕ್ಕೆ ತಿರುನೀಲಕಂಠರ ರಗಳೆಯಲ್ಲಿ ವೃದ್ಧವೇಷದ ಶಿವನಿಂದ ಬಂದೊದಗಿದ ಪೀಕಲಾಟಕ್ಕೆ ನೊಂದುಬೆಂದು ಹೋದ ತಿರುನೀಲಕಂಠರ ಸ್ಥಿತಿಯನ್ನುವರ್ಣಿಸುವಾಗ ಬರುವ ತಿರುನೀಲಕಂಠರು ನೋವುತೋಳಗೊಳಗೆ, ಬೆಚಿದ ನುಲಿಯಿಂತೆ ಬರಿಯಾಕಾರದಿಂತೊಳಗೆ'- ಎಂಬ ಭಾಗ ಸಾಷಿ. ಸ್ವರ್ಗಗಿನ, ಮುಕುತಿಗಿಡುವೆ, ಹೊನ್ನಂಗಿನ್ನಂ, ಪರುಸಗಿರೂಪ- ಇತ್ಯಾದಿ ಕನ್ನಡ ಭಾಷೆಯ ಜಾಯಮಾನಕ್ಕಸುವ ಪ್ರಯೋಗಗಳನ್ನು ಬಳಸಿಕೊಂಡಿದ್ದಾನೆ. ಜನಪದ ನುಡಿಗಟ್ಟುಗಳನ್ನು ಬಳಸಿಕೊಂಡಿದ್ದಾನೆ. “ನಿತ್ಯಪರಿವರ್ತನ ಶೀಲವಾದ ಆಡುನ್ನುಡಿಯ ಜಾಡುಹಿಡಿದು ಸಾಗುವ, ನಾಡಿಹಿಡಿರು ನೋಡುವ, ಶಬ್ದದ ಮೂಗನ್ನೂ ಹಿಡಿದು ಅರ್ಥದಬಾಯಿನ್ನು ಬಿಡಿಸಿ ಕುವತ್ತನ್ನು ಮಾಡುವ ಆ ಮೂಲಕ ಮಹತ್ತನ್ನು ನೀಡುವ ಶಕ್ತಿ ಎಲ್ಲಾ ಕವಿಗಳಿಗೂ ಇರುವುದಿಲ್ಲ; ಅಚಿಥವರಲ್ಲಿ ಹಂಪೆಯ ಹರಿಹರನೂ ಒಬ್ಬ ಎಂಬುದನ್ನು ಅವನ ಶತ್ರುಗಳೂ ಒಪ್ಪಿಕೊಳ್ಳಬೇಕಾಗುತ್ತದೆ.”[೩೯]

ಚಂಪೂಕಾವ್ಯಗಳಲ್ಲಿ ಗದ್ಯವು ಬಳಕೆಯಲ್ಲಿತ್ತು. ಹರಿಹರ ದೀರ್ಘ ರಗಳೆಗಳ ನಡುವೆ ಗದ್ಯದ ಒಂದು ಪ್ರತ್ಯೇಕ ಸ್ಥಲವನ್ನು ತರುತ್ತಾನೆ. ಏಕತಾನತೆಯಿಂದ ಮುಕ್ತವಾಗಲು ಗದ್ಯವನ್ನು ಬಳಸಿಕೊಂಡಿದ್ದಾನೆ. ಆತ ಬಳಿಸಿಕೊಂಡ ಗದ್ಯ ಗ್ರಂಥಸ್ಥವಾದುದ್ದಲ್ಲ. ಜನರು ಮಾತನಾಡುವಾಗ ಬಳಸುತ್ತಿದ್ದ ಪದಗಳನ್ನೂ, ವಾಕ್ಯಗಳನ್ನು ಬಳಸಿಕೊಂಡ. “ಹರಿಹರನ ರಗಳೆಯಲ್ಲಿಯ ಗದ್ಯದಲ್ಲಿ ತೂಕಮಾಡಿ ಆರಿಸಿದ ಉಚಿತ ಪದ ಪ್ರಯೋಗಗಳಿವೆ. ಕಿವಿಗೆ ಇಂಪಾದ ಸರಣಿಯಿದೆ. ಸರಸವಾದ ನಿರೂಪಣೆಯಿದೆ. ಸಂದರ್ಭಕ್ಕೆ ತಕ್ಕಂತೆ ವಾಕ್ಯಗಳ ವೈವಿಧ್ಯವಿದೆ. ಇವುಗಳ ಜೊತೆಗೆ ಕವಿಯ ಸ್ಫೂರ್ತಿ, ಆವೇಶಗಳೂ ಸೇರಿ ಇಲ್ಲಿಯ ಶೈಲಿಯು ಜೀವಂತವಾಗಿ ಕಳಕಳಿಸುತ್ತದೆ.”[೪೦] ಒಟ್ಟಿನಲ್ಲಿ ಹರಿಹರ ಎಲ್ಲರೂ ಓದಿ ಓದಿಸಿ ಅರ್ಥಮಾಡಿಕೊಳ್ಳಬಹುದಾದ ಶೈಲಿಯಲ್ಲೇ ಕಾವ್ಯ ರಚಿಸಿದ್ದಾನೆ.

ಹರಿಹರನ ರಗಳೆಗಳಲ್ಲಿ 'ಭಕ್ತಿ'ಯೇ ಪ್ರಧಾನವಾದ ರಸ, 'ಭಕಿ'ರಸ ರಾಜ, ಉಳಿದವುಗಳಿಗೆ ನಂತರದ ಸ್ಥಾನ. ಶೃಂಗಾರ, ಕರುಣ, ಭಯಾನಕ, ಅದ್ಭುತ, ಹಾಸ್ಯರಸಗಳಿಗೂ ಸ್ಥಾನವಿದೆ. ನಂಬಿಯಣ್ಣನ ರಗಳೆಯಲ್ಲಿ ಸಂಕಿಲಿನಾಚಿಯ ಸೌಂದರ್ಯ ವರ್ಣಿಸುವಾಗ ಶೃಂಗಾರ ರಸವನ್ನು ಕಾಣಬಹುದು. ಇಳೆಯಾಂಡಗುಡಿಮಾರರ ರಗಳೆಯಲ್ಲಿ ಮಗನ ಸಾವಿನ ಸಂದರ್ಭ ಕರುಣಾರಸ ಪೂರಿತವಾದುದು. ಚಂಡೇಶಪಿಳ್ಳೆಯ ರಗಳೆಯಲ್ಲಿ 'ಭಯ'ವನ್ನು ತಿರುನೀಲಕಂಠರ ರಗಳೆಯಲ್ಲಿ ಭಕ್ತ ವೇಷದ ಶಿವನಿಗೂ ತಿರುನೀಲಕಂಠರಿಗೂ ನಡೆಯುವ

೩೮. ಡಿ. ಎಲ್. ನರಸಿಂಹಾಚಾರ್ಯ, ಹಂಪೆಯ ಹರಿಹರ, ಪುಟ ೫೫.

೩೯. ವಿವಿಧ ಲೇಖಕರು, ಹರಿಹರ ವಿಚಾರ ಸಂಕಿರಣ, ಪುಟ ೧೧೦

೪೦. ಅಡಿಟಿಪ್ಪಣಿ ೩೮ ರಂತೆ, ಪುಟ ೫೪.

ಸಂದರ್ಭದಲ್ಲಿ 'ಹಾಸ್ಯ' ರಸವನ್ನೂ ಕಾಣಬಹುದು. ಕಾರಿಕಾಲಮ್ಮೆಯ ರಗಳೆಯಲ್ಲಿ ಶಿವನ ಘನತಾಂಡವನೃತ್ಯದ ' ಅದ್ಭುತ' ರಸವನ್ನು ಕಾಣಬಹುದು.

ಇಲ್ಲಿಯವರೆಗಿನ ತೌಲನಿಕ ಅಧ್ಯಯನದಿಂದ ಹರಿಹರನ ಪುರಾತನರ ರಗಳೆಗಳಿಗೆ ಶೇಕ್ಕಿಳಾರನ ಪೆರಿಯಪುರಾಣ ಆಕರಗ್ರಂಥವಾಗಿಲ್ಲ ಎಂದು ಭಾವಿಸಬಹುದು. ಕವಿಗಳು ಒಂದೇಮೂಲದಿಂದ ವಿಷಯ ಸಂಗ್ರಹಣೆ ಮಾಡಿರಬಹುದು. ಪುರಾತನರಿದ್ದ ಸ್ಥಳಗಳಲ್ಲಿ ಹರಿಹರ ಸಂದರ್ಶಿಸಿ ವಿಷಯ ಸಂಗ್ರಹಿಸಿದ್ದಾನೆಂದು ಭಾವಿಸುತ್ತಾ ಈ ಅಧ್ಯಯನಕ್ಕೆ ವಿರಾಮ ಹಾಕಬಹುದು.

# ಅಧ್ಯಾಯ -೫

## ಉಪಸಂಹಾರ

ಶೇಕ್ಕಿಳಾರ್ ಮತ್ತು ಹರಿಹರ ಹನ್ನೆರಡನೆಯ ಮತ್ತು ಹದಿಮೂರನೆಯ ಶತಮಾನದಲ್ಲಿ ದಕ್ಷಿಣ ಭಾರತ ಕಂಡ ಭಕ್ತ ಕವಿಗಳಲ್ಲಿ ಪ್ರಮುಖರು. ಇವರಿಬ್ಬರೂ ಶಿವಭಕ್ತರನ್ನೇ ತಮ್ಮ ಕಾವ್ಯದ ಮೂಲದ್ರವವನ್ನಾಗಿಸಿಕೊಂಡು ಕಾವ್ಯ ರಚನೆಗೆ ತೊಡಗಿದವರು. ಇವರೀರ್ವರ ಮುಖ್ಯ ಧೋರಣೆ ಭಕ್ತಿ ಪ್ರಚಾರವೇ ಆಗಿದೆ. ತಮಿಳುನಾಡಿನಲ್ಲಿ ಜರುಗಿದ ಪುರಾತನರ ಚಳುವಳಿಯನ್ನು ಸಾಹಿತ್ಯದಲ್ಲಿ ದಾಖಲುಗೊಳಿಸಿದವರಲ್ಲಿ ಶೇಕ್ಕಿಳಾರನೂ ಒಬ್ಬ, ತಮಿಳಿನ ಪುರಾತನರನ್ನು ಕನ್ನಡಕ್ಕೆ ತರುವುದರ ಜೊತೆಗೆ, ಕರ್ನಾಟಕದಲ್ಲಿ ನಡೆದ ಬಸವಾದಿ ಶರಣರ ಚಳುವಳಿಯನ್ನು ಸಾಹಿತ್ಯದಲ್ಲಿ ಮೊದಲಿಗೆ ದಾಖಲಿಸಿದವನು ಮಹಾಕವಿ ಹರಿಹರ, ಅಷ್ಟೇ ಅಲ್ಲ ಚಾರಿತ್ರಿಕ ವ್ಯಕ್ತಿಗಳನ್ನು ಪುರಾಣೀಕರಿಸುವ ಕೆಲಸ ಆರಂಭವಾದುದ್ದು ಹರಿಹರನಿಂದಲೇ.

ಶೇಕ್ಕಿಳಾರನ ಕಾಲ, ದೇಶ, ಮತಗಳನ್ನು ಕುರಿತು ವಿದ್ವಾಂಸರಲ್ಲಿ ಏಕಾಭಿಪ್ರಾಯವಿದ್ದರೆ, ಹರಹರನ ಬಗ್ಗೆ ಈ ಒಮ್ಮತಾಭಿಪ್ರಾಯವನ್ನು ನಾವು ಕಾಣಲಿಕ್ಕೆ ಸಾಧ್ಯವಾಗುತ್ತಿಲ್ಲ. ಆದ ಕಾರಣ ನನ್ನ ಈ ನಿಬಂಧದಲ್ಲಿ ಇದುವರೆಗೆ ವಿದ್ವಾಂಸರು ಹರಿಹರನ ಕಾಲ, ದೇಶಗಳನ್ನು ಕುರಿತು ಚರ್ಚಿಸಲಾದ ಅಂಶಗಳನ್ನು ಗಮನಿಸಿ ಆತ ೧೨ನೇ ಶತಮಾನದ ಅಂತ್ಯಭಾಗದಲ್ಲೂ ೧೩ರ ಆದಿಭಾಗದಲ್ಲೂ ಇದ್ದಿರಬಹುದೆಂಬ ತೀರ್ಮಾನಕ್ಕೆ ಬರಲಾಗಿದೆ. ಈ ಹಂತದಲ್ಲಿ ಶೇಕ್ಕಿಳಾರ್ ಮತ್ತು ಹರಿಹರರ ಕೃತಿಗಳನ್ನು ಪರಿಚಯಿಸಿರುತ್ತೇನೆಯೇ ಹೊರತು ಅವುಗಳ ಆಂತರ್ಯಕ್ಕೆ ಇಳಿದಿರುವುದಿಲ್ಲ. ಈ ಹಂತದಲ್ಲಿ ಹರಿಹರ ರಚಿಸಿರುವ ಪುರಾತನರ ರಗಳೆಗಳ ಸಂಖ್ಯಾನಿರ್ಣಯವನ್ನು ಗಮನಿಸುವ ಪ್ರಯತ್ನವನ್ನು ಎರಡನೇ ಅಧ್ಯಾಯದಲ್ಲಿ ಮಾಡಲಾಗಿದೆ.

ಮೂರನೇ ಅಧ್ಯಾಯದಲ್ಲಿ ಈ ಇಬ್ಬರೂ ಕವಿಗಳ ಕಾವ್ಯವಸ್ತುವಿನ ಬಗ್ಗೆ ತಿಳಿಸಿ, ಶೇಕ್ಕಿಳಾರ್ ಅರುವತ್ತುಮೂರುಜನ ತಮಿಳು ಶೈವಸಂತರನ್ನು ಕುರಿತು ಕಾವ್ಯ ರಚಿಸಲು ಕಾರಣವಾದ ಹಿನ್ನೆಲೆಯ ಬಗ್ಗೆ ಹೇಳಿದ್ದೇನೆ. ಅದೇರೀತಿ ಹರಿಹರ ತನಗಿಂತ ಹಿಂದೆ ಇದ್ದ ಕಾವ್ಯಪರಂಪರೆಗೆ ಬಿನ್ನವಾಗಿ ಹೊಸ ಕಾವ್ಯಪರಂಪರೆಯನ್ನು ಹುಟುಹಾಕಿದ್ದರ ಬಗ್ಗೆ ವಿವರಿಸಿದ್ದೇನೆ.

ನಾಲ್ಕನೇ ಅಧ್ಯಾಯದಲ್ಲಿ ಹರಿಹರ ಮತ್ತು ಶೇಕ್ಕಿಳಾರರ ಕೃತಿಗಳಲ್ಲಿನ ಕಥಾವಸ್ತುವಿನ ಸಾಮ್ಯ ಮತ್ತು ವೈಷಮ್ಯಗಳನ್ನು ನೋಡಲಾಗಿದೆ. ಎರಡೂ ಕೃತಿಗಳಲ್ಲಿ ಪಾತ್ರಚಿತ್ರಣ, ಸನ್ನಿವೇಶ, ವರ್ಣನೆಗಳು ಮೂಡಿಬಂದಿರುವ ಬಗೆಯನ್ನು ತೌಲನಿಕವಾಗಿ ಅಧ್ಯಯನ ಮಾಡಲಾಗಿದೆ. ಪ್ರತ್ಯೇಕವಾಗಿ, ಪಾತ್ರಚಿತ್ರಣ, ಸನ್ನಿವೇಶ,

ವರ್ಣನೆ, ಪವಾಡಗಳ ಅಧ್ಯಯನಕ್ಕೆ ತೊಡಗಿದಾಗ ವಿವರವಾಗಿ ಎರಡೂ ಕೃತಿಗಳಿಗಿರುವ ಭಿನ್ನತೆಯನ್ನು ತೋರಿಸಲಾಗಿದೆ. ಜೊತೆಗೆ ಈ ಸಂದರ್ಭದಲ್ಲೇ ಕೆಲವು ರಗಳೆಗಳನ್ನು ಸಾಂಸ್ಕೃತಿಕ ಹಾಗೂ ಸ್ತ್ರೀವಾದಿ ನೆಲೆಯಲ್ಲಿ ನೋಡುವ ಪ್ರಯತ್ನವನ್ನೂ ಮಾಡಿದ್ದೇನೆ. ಹರಿಹರನ ಛಂದಸ್ಸಿನ ಬಗ್ಗೆ ಸಂಕ್ಷಿಪ್ತವಾಗಿ ತಿಳಿಸಿದ್ದೇನೆ. ಕಾವ್ಯದಲ್ಲಿ ಮುಖ್ಯವಾಗಿ ಕಾಣುವ ಭಕ್ತಿರಸದ ಬಗ್ಗೆ ಹಾಗೂ ಅದ್ಭುತ, ಶೃಂಗಾರ, ಹಾಸ್ಯ, ಕರುಣಾರಸಗಳನ್ನು ಕುರಿತು ಹೇಳಲಾಗಿದೆ.

ಒಟ್ಟಾರೆಯಾಗಿ ಈ ತೌಲನಿಕ ಅಧ್ಯಯನದ ಮೂಲಕ ಪೆರಿಯಪುರಾಣ ಹರಿಹರನಿಗೆ ಆಕರಗ್ರಂಥವಾಗಿಲ್ಲ ಎಂಬುದನ್ನು ಗುರುತಿಸುವ ಪ್ರಯತ್ನವನ್ನು ಮಾಡಲಾಗಿದೆ.

# ಆಕರ ಗ್ರಂಥಗಳು


೧) ಹರಿಹರನ ರಗಳೆಗಳು. (ಸಂ) : ಎಂ. ಎಂ. ಕಲಬುರ್ಗಿ
ಪ್ರಸಾರಾಂಗ, ಕರ್ನಾಟಕ
ವಿಶ್ವವಿದ್ಯಾಲಯ, ಹಂಪಿ. ೧೯೯೯.

೨) ನಂಬಿಯಣ್ಣನ ರಗಳೆ. (ಸಂ) : ತೀ. ನಂ. ಶ್ರೀಕಂಠಯ್ಯ,
ಕಾವ್ಯಾಲಯ ಪ್ರಕಾಶನ,
ಮೈಸೂರು. ೧೯೬೩.

೩) ಪೆರಿಯ ಪುರಾಣ : ಎಲ್. ಗುಂಡಪ್ಪ
(ಕನ್ನಡಾನುವಾದ ಭಾಗ-೧) ಪ್ರಕಟಣ ಮತ್ತು
ಪ್ರಚಾರೋಪನ್ಯಾಸ ವಿಭಾಗ,
ಬೆಂಗಳೂರು ವಿಶ್ವವಿದ್ಯಾನಿಲಯ,
ಬೆಂಗಳೂರು ೧೯೫೪.

೪) ಪೆರಿಯಪುರಾಣಂ. (ಭಾಗ-೧) : ಶಂಕರಕೆದಿಲಾಯ, ಎ.
ಮದ್ರಾಸು ವಿಶ್ವವಿದ್ಯಾನಿಲಯ,
ಮದ್ರಾಸು, ೧೯೫೪

೫) ಪೆರಿಯಪುರಾಣಂ (ಭಾಗ೨) : ಶಂಕರ ಕೆದಿಲಾಯ, ಎ.
ಮದ್ರಾಸು ವಿಶ್ವವಿದ್ಯಾನಿಲಯ,
ಮದ್ರಾಸು, ೧೯೭೦

## ಪರಾಮರ್ಶನ ಗ್ರಂಥಗಳು


೧. ದೇವಿರಪ್ಪ ಎಚ್. : ಶರಣ ಚರಿತಮಾನಸಂ
ಗೌರಿ ಶಂಕರ ಬುಕ್ ಡಿಪೋ,
ಮೈಸೂರು, ೧೯೬೮

೨. ನರಸಿಂಹಾಚರ್ ಡಿ.ಎಲ್. : ಹಂಪೆಯ ಹರಿಹರ
ಪ್ರಸಾರಾಂಗ,
ಮೈಸೂರು ವಿಶ್ವವಿದ್ಯಾನಿಲಯ,
ಮೈಸೂರು. ೧೯೮೩

೩. ನಾಗಭೂಷಣ ಓ. ಎಲ್. : ಹರಿಹರ
ಕರ್ನಾಟಕ ಸಾಹಿತ್ಯ ಅಕಾಡೆಮಿ,
ಬೆಂಗಳೂರು, ೧೯೯೬.

೪. ಬಸವಾರಾಧ್ಯ ಎಸ್. : ಲೇಖನ ಸಂಚಯ
ಪ್ರಾಚ್ಯಕಾವ್ಯ ಪ್ರಕಾಶನ ಮಂದಿರ,
ಮೈಸೂರು. ೧೯೮೦

೫. ಮಾಳವಾಡ ಸ.ಸ. : ಹರಿಹರನ ರಗಳೆಯಲ್ಲಿ-
ಜೀವನ ದರ್ಶನ,
ಪ್ರಸಾರಾಂಗ,
ಮೈಸೂರು ವಿಶ್ವವಿದ್ಯಾನಿಲಯ,
ಮೈಸೂರು. ೧೯೬೯.

೬. ಮೊರಬದ ಮಲ್ಲಿಕಾರ್ಜುನ : ಪುರಾತನರು
ಜಗದ್ಗುರು ಶೀ ಶಿವರಾತ್ರೀಶ್ವರ
ಗ್ರಂಥಮಾಲೆ, ಮೈಸೂರು. ೨೦೦೮.

೭. ಮಹಾದೇವಯ್ಯ ಕೆ. ಪಿ. : ಹರಿಹರನ ರಗಳೆ ಸಾಹಿತ್ಯಕ-
ಅಧ್ಯಯನ
ಅಭಿರುಚಿ ಪ್ರಕಾಶನ,
ಮೈಸೂರು. ೧೯೯೯.

೮. ಲಠ್ಠೆ. ಎಂ. ಎಸ್. : ಹರಿಹರನ ಮೂರು ರಗಳೆಗಳು
ಉಪನ್ಯಾಸ ಗ್ರಂಥಮಾಲೆ.
ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ. ೧೯೭೨.

೯. ಲಠ್ಠೆ ಎಂ. ಎಸ್. : ತಮಿಳು ಶಿವಭಕ್ತೆ ಕಾರಿಕಾಲಮ್ಮೆ
ಉಪನ್ಯಾಸ ಗ್ರಂಥಮಾಲೆ,
ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ. ೧೯೭೦.

೧೦. ವಿದ್ಯಾಶಂಕರ ಎಸ್. : ನಂಬಿಯಣ್ಣ-ಒಂದು ಅಧ್ಯಯನ
ಪ್ರಿಯದರ್ಶಿನಿ ಪ್ರಕಾಶನ,
ಬೆಂಗಳೂರು. ೧೯೮೮.

೧೧. ವಿದ್ಯಾಶಂಕರ ಎಸ್. : ವಚನಾನುಶೀಲನ.
ಪ್ರಿಯದರ್ಶಿನಿ ಪ್ರಕಾಶನ,
ಬೆಂಗಳೂರು. ೨೦೦೭

೧೨. ವಿದ್ಯಾಶಂಕರ ಎಸ್. : ವೀರಶೈವ ಪುರಣ-
ಒಂದು ಅಧ್ಯಯನ,
ಪ್ರಿಯದರ್ಶಿನಿ ಪ್ರಕಾಶನ,
ಬೆಂಗಳೂರು. ೨೦೦೬.

೧೩. ಶ್ರೀನಿವಾಸ ಪಾ. ಸ. : ಸಾರೂಪ್ಯ
ಪ್ರಿಯದರ್ಶಿನಿ ಪ್ರಕಾಶನ,
ಬೆಂಗಳೂರು. ೧೯೯೯.

೧೪ ಶಿವರುದ್ರಪ್ಪ ಜಿ. ಎಸ್. (ಸಂ.) : ಸಾಧನೆ
ಸಂಪುಟ ೬, ಸಂಚಿಕೆ-೪, ೧೯೭೬.
ಪ್ರಸಾರಂಗ, ಬೆಂಗಳೂರು ವಿ.ವಿ.
ಬೆಂಗಳೂರು.

೧೫. ಶಿವರುದ್ದಪ್ಪ ಜಿ. ಎಸ್. (ಸಂ) : ಸಾಧನೆ
ಸಂಪುಟ ೧೨, ಸಂಚಿಕೆ-೧, ೧೯೮೩.
ಪ್ರಸಾರಂಗ, ಬೆಂಗಳೂರು ವಿ.ವಿ.
ಬೆಂಗಳೂರು.

೧೭. ಶಿವರುದ್ರಪ್ಪ ಜಿ. ಎಸ್. (ಸಂ) : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ,
ಸಂಪುಟ -೩ ಪ್ರಸಾರಂಗ,
ಬೆಂಗಳೂರು : ೧೯೭೬.

೧೭. ಶಿವಾನಂದ ಎಸ್. ವಿರಕ್ತಮಠ (ಸಂ): ಹರಿಹರನ ರಗಳೆಗಳು-
ಸಾಂಸ್ಕೃತಿಕ ಮುಖಾಮುಖಿ
ಪ್ರಸಾರಾಂಗ,
ಕನ್ನಡ ವಿಶ್ವವಿದ್ಯಾಲಯ,
ಹಂಪಿ ೨೦೦೩

೧೮. ಸಿದ್ದಯ ಪುರಾಣಿಕ : ಶರಣಚರಿತಾಮೃತ
ವಯಸ್ಕರ ಶಿಕ್ಷಣ ಸಮಿತಿ,
ಮೈಸೂರು. ೧೯೬೪.

೧೯. ಹಿರೇಮಲ್ಲೂರು ಈಶ್ವರನ್ : ಹರಿಹರನ ಕೃತಿಗಳು
(ಒಂದು ಸಂಖ್ಯಾ ನಿರ್ಣಯ)
ಪ್ರಸಾರಾಂಗ, ಮೈಸೂರು ವಿ.ವಿ.
ಮೈಸೂರು. ೧೯೭೧.

೨೦. ಹಿರೇಮಠ ಎಸ್. ಎಸ್. : ಹರಿಹರ ಚಿತ್ರಿಸಿದ ದಲಿತ ಶರಣರು,
ಪ್ರಸಾರಾಂಗ, ಕನ್ನಡ ವಿ.ವಿ
ಹಂಪಿ. ೧೯೮೮.

೨೧. ಹಂಡಿ, ಬಿ.ಬಿ. : ಹರಿಹರನು ಚಿತ್ರಿಸಿದ ಶಿವಶರಣೆಯರು
ಉಪನ್ಯಾಸ ಗ್ರಂಥಮಾಲೆ,
ಕರ್ನಾಟಕ ವಿ.ವಿ. ಧಾರವಾಡ : ೧೯೭೩.

೨೨. ವಿವಿಧ ಲೇಖಕರು : ಹರಿಹರ ವಿಚಾರ ಸಂಕಿರಣ
ಕನ್ನಡ ಸಾಹಿತ್ಯ ಪರಿಷತ್,
ಬೆಂಗಳೂರು. ೧೯೯೧.

★★★★



ಪತ್ರ ಪ್ರಸಂಗ (ನಂಬಿಯಣ್ಣನ ರಗಳೆ)



ಬದುಕಿ ಬಂದ ನಂಬಿಬಾಲಕ



ಬೇಡರ ಕಣ್ಣಪ್ಪ

